



ಕನ್ನಡ ವಿಶ್ವವಿದ್ಯಾಲಯ ಹಂಪಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ವಿದ್ಯಾರಣ್ಯ–583 276

ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ವಿಷಯ

# ವಿವೇಕ ಶಾನಭಾಗರ ಸಣ್ಣ ಕಥಾಲೋಕ– ಒಂದು ಅಧ್ಯಯನ

2014–15

ಇಂದಿರಾ. ಎಸ್. ಧರಣಿ
ನೊ.ಸ. : 142001030036

ಮಾರ್ಗದರ್ಶಕರು
ಡಾ. ಹನುಮಂತರಾಯಪ್ಪ.ಎಚ್



ಮಾನ್ಯತಾ ಸಂಸ್ಥೆ
ಸಂಶೋಧನಾ ಕೇಂದ್ರ
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ,
ಬೆಂಗಳೂರು.




**ಕನ್ನಡ ವಿಶ್ವವಿದ್ಯಾಲಯ ಹಂಪಿ**
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
**ವಿದ್ಯಾರಣ್ಯ–583 276**



ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

**ವಿಷಯ**

# ವಿವೇಕ ಶಾನಭಾಗರ ಸಣ್ಣ ಕಥಾಲೋಕ– ಒಂದು ಅಧ್ಯಯನ

**2014–15**

**ಇಂದಿರಾ. ಎಸ್. ಧರಣಿ**
ನೊ.ಸ. : 142001030036

**ಮಾರ್ಗದರ್ಶಕರು**
**ಡಾ. ಹನುಮಂತರಾಯಪ್ಪ.ಎಚ್**



**ಮಾನ್ಯತಾ ಸಂಸ್ಥೆ**
**ಸಂಶೋಧನಾ ಕೇಂದ್ರ**
**ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ,**
**ಬೆಂಗಳೂರು.**

1220

## ಸಂಶೋಧಕರ ಪತ್ರ

**'ವಿವೇಕ ಶಾನಭಾಗರ ಸಣ್ಣ ಕಥಾಲೋಕ ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಈ ಎಂ.ಫಿಲ್ ಸಂಪ್ರಬಂಧವನ್ನು **ಡಾ. ಹನುಮಂತರಾಯಪ್ಪ.ಎಚ್.** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಇಂದಿರಾ. ಎಸ್. ಧರಣಿ

ದಿನಾಂಕ:
ಸ್ಥಳ : ಬೆಂಗಳೂರು

**ಇಂದಿರಾ.ಎಸ್.ಧರಣಿ**
ನೊ.ಸಂ. 142001030036
ಸಂಶೋಧನಾ ವಿದ್ಯಾರ್ಥಿನಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಇಂದಿರಾ.ಎಸ್.ಧರಣಿಯವರು,** ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ **'ವಿವೇಕ ಶಾನಭಾಗರ ಸಣ್ಣ ಕಥಾಲೋಕ'** ಒಂದು ಅಧ್ಯಯನ ಎಂಬ ಸಂಪ್ರಬಂಧವನ್ನು ಹಂಪಿ ವಿಶ್ವವಿದ್ಯಾಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ಸಂಪ್ರಬಂಧ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರೆ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ : ಬೆಂಗಳೂರು

**ಡಾ. ಹನುಮಂತರಾಯಪ್ಪ.ಎಚ್**
ಮಾರ್ಗದರ್ಶಕರು

Dr. H. Hanumantharayappa
M.A., Ph.D.,
Associate Professor in Kannada
Govt. Arts College, Bengaluru-560 001.

# ಪರಿವಿಡಿ

'ಹೂ ಅಳಿಯುತ್ತದೆ
ಬೀಜ ಉಳಿಯುತ್ತದೆ
ಅಂತೆಯೇ ಮನುಷ್ಯ ಅಳಿಯುತ್ತಾನೆ
ಬದುಕು ಉಳಿಯುತ್ತದೆ
ಕಥೆ ಮುಂದುವರೆಯುತ್ತದೆ'

–ಖಲೀಲ್ ಗಿಬ್ರಾನ್

'ಒಂದೂರಿನಲ್ಲಿ', 'ಒಂದಾನೊಂದು ಕಾಲದಲ್ಲಿ'------ ಈ ಮಾತುಗಳನ್ನು ಕೇಳದೆ ಬೆಳೆದ ಮನುಷ್ಯರೇ ಇಲ್ಲವೇನೋ!. ಬಾಲ್ಯದಲ್ಲಿ ಅಜ್ಜಿ ಹೇಳಿದ ಕಥೆಗಳೇ – ನಾನು ನೋಡದ ಪ್ರಪಂಚದ, ಕೇಳಿದ ಕಥೆಗಳು.

ಶಾಲಾ ದಿನಗಳಲ್ಲಿ ನಾನು ಓದುತ್ತಿದ್ದ ಚಂದಾಮಾಮ, ಬಾಲಮಿತ್ರ, ಬೊಂಬೆಮನೆ, ಅಕ್ಬರ್ ಬೀರಬಲ್ ಕಥೆಗಳು, ಫಾಂಟಮ್, ಮಾಂಡ್ರೇಕ್ ಕಾಮಿಕ್ಸ್ ಕಥೆಗಳು ನನ್ನ ಮನಸ್ಸಿನ ಆಳದಲ್ಲಿ ವಿಸ್ಮಯ, ನಿಗೂಢತೆಯ ಕೋಟೆಯನ್ನು ಕಟ್ಟಿದವು. ಕುತೂಹಲದ ಪರಾಕಾಷ್ಠೆಯ ಕಲ್ಪಿತ ಕಥೆಗಳು ಕನಸ್ಸಿನಲ್ಲಿಯೂ ಪ್ರತ್ಯಕ್ಷವಾಗಿ ಮನುಷ್ಯರ ಮನಸ್ಸನ್ನು ಅಚ್ಚರಿಗೊಳಸುತ್ತಿದ್ದವು.

ಕಾಲೇಜು ವಿದ್ಯಾಭ್ಯಾಸದ ಹಂತದಲ್ಲಿ ಓದಿದ ಕಥೆಗಳು ಮನರಂಜನೆ, ಭ್ರಾಮಕತೆಯ ಮಿತಿಯನ್ನು ಮೀರಿ ವಾಸ್ತವ ಜಗತ್ತಿನ ನೈಜ ಚಿತ್ರಣವನ್ನು ನೀಡಿ ಬೆಚ್ಚಿ ಬೀಳಿಸುತ್ತಿದ್ದವು. ಕಾಲ್ಪನಿಕತೆ ಮತ್ತು ಜೀವನಾನುಭವದ ನಡುವೆ ನಿಂತ ಜೀವಿಗೆ ಸಣ್ಣಕಥೆಗಳ ಲೋಕದ ಮೂಲಕ ಜಗತ್ತಿನ ನೋವು, ಕ್ರೌರ್ಯ, ವಿಷಾದ, ಅಸಮಾನತೆ, ಅನ್ಯಾಯ, ಶೋಷಣೆ, ಸ್ತ್ರೀಯರ ಮೇಲಿನ ದೌರ್ಜನ್ಯ, ಬಡತನ, ಅಮಾನವೀಯತೆಯ ಕರಾಳತೆಯನ್ನು ನೋಡುವಂತಾಯಿತು.

ಗಾತ್ರದಲ್ಲಿ ಕಿರಿದಾಗಿದ್ದು, ಅರ್ಥದಲ್ಲಿ ಹಿರಿದಾಗಿರುವ ಸಣ್ಣಕಥೆಗಳು ಬಹುಜನರು ಗಂಭೀರವಾಗಿ ಓದುವ, ಇಷ್ಟಪಡುವ ಸಾಹಿತ್ಯ ಪ್ರಕಾರ. ಈ ಕಾರಣಕ್ಕಾಗಿಯೇ ನಮ್ಮ ನಡುವಿನ ಸಮಕಾಲೀನ ಮಹತ್ವದ ಲೇಖಕರಾದ ವಿವೇಕ ಶಾನಭಾಗ ಅವರ ಐದು ಸಣ್ಣಕಥಾಸಂಕಲನಗಳನ್ನು ಆರಿಸಿಕೊಂಡಿದ್ದೇನೆ.

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ಅಧ್ಯಾಯ ಒಂದರಲ್ಲಿ ತಿಳಿಯುವ ಪ್ರಯತ್ನವನ್ನು ಮಾಡಿದ್ದೇನೆ. ಸಣ್ಣ ಕಥಾಸಾಹಿತ್ಯವು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದ ಸ್ವರೂಪ ಮತ್ತು ಉದ್ದೇಶವನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಲಾಗಿದೆ. ಉಳಿದ ಅಧ್ಯಾಯಗಳಲ್ಲಿ ವಿವೇಕ ಶಾನಭಾಗರ ಕಥೆಗಳ ವಿಭಿನ್ನ ಆಯಾಮಗಳನ್ನು ಅರಿತುಕೊಳ್ಳುವ ಸಾಹಸಕ್ಕೆ ಕೈ ಹಾಕಿದ್ದೇನೆ. ವಿವೇಕ ಶಾನಭಾಗರ ಬದುಕು– ಬರಹದ ಅಧ್ಯಾಯದಲ್ಲಿ ಕಥೆಗಾರರ ಇತರ ವಿವರಗಳನ್ನು ದಾಖಲಿಸಬೇಕೆಂದಿದ್ದೇನೆ. ವಿವೇಕ ಶಾನಭಾಗರ ಕೃತಿಗಳಲ್ಲಿ ಅಂತರಂಗದ ತುಡಿತ, ಜಾಗತೀಕರಣದ ಸವಾಲುಗಳು, ಮನುಷ್ಯ ಸಂಬಂಧಗಳ ಸಂಕೀರ್ಣತೆ ಮತ್ತು ಸಾಮಾಜಿಕ ಕಳಕಳಿ, ಸ್ತ್ರೀ ಪಾತ್ರಗಳು ಇತ್ಯಾದಿ ಒಳನೋಟಗಳನ್ನು ಅವರ ಕಥೆಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಸಹಜ ಮತ್ತು ಸರಳ ಎನ್ನಿಸುವ ಬದಲಾದ ಸಂಗತಿಗಳ ಗರ್ಭದಲ್ಲಿ ಹುದುಗಿರುವ ಮೌನ ಸಂಘರ್ಷ–ಜಗತ್ತನ್ನು ಮತ್ತಷ್ಟು ಭೀಕರಗೊಳಿಸುತ್ತಿರುವ ಆತಂಕ ವಿವೇಕ ಶಾನಭಾಗರ ಕಥೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿದಾಡುತ್ತಿದೆ.

'ದೇಶ–ಕಾಲ' ಎಂಬ ಗಂಭೀರ ಸಾಹಿತ್ಯಿಕ ನಿಯತಕಾಲಿಕೆಯ ಸಂಪಾದಕರಾದ ವಿವೇಕ ಶಾನಭಾಗ್ ಕತೆಗಾರ, ಕಾದಂಬರಿಕಾರ, ನಾಟಕಕಾರರಾಗಿ ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆಯೇನು ಎಂಬುದರ ಬಗ್ಗೆಯೇ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ತಮ್ಮ ಸುತ್ತಮುತ್ತಲು ಬದುಕನ್ನು ಅನುಭವಿಸುತ್ತಿದ್ದ ರೀತಿಯಲ್ಲೇ ಅದನ್ನು ರೂಪಿಸುವುದು ವಿವೇಕ ಶಾನಭಾಗರ ಕಥಾ ಶೈಲಿ.

ಇಂಜಿನಿಯರಿಂಗ್ ಪದವೀಧರರಾದ ವಿವೇಕ ಶಾನಭಾಗ್ ಉತ್ತರ ಕನ್ನಡ ಜಿಲ್ಲೆಯವರು, ಕತೆಗಾರ–ಕಾದಂಬರಿಕಾರ–ನಾಟಕಕಾರ. ಕನ್ನಡ ಸಾಹಿತ್ಯದ ವಿಶಿಷ್ಟ ತ್ರೈಮಾಸಿಕ 'ದೇಶಕಾಲ' ಎಂಬ ಸಾಹಿತ್ಯದ ನಿಯತ ಕಾಲಿಕೆಯ ಸಂಪಾದಕರು.

ಇವರು ತಮ್ಮ ಮೊದಲ ಕಥೆ 'ಚಿಪ್ಪುಗಳು' ರಚಿಸಿದಾಗ ಇವರಿಗೆ 17 ವರ್ಷ. ಎರಡನೆಯ ಕಥೆ 'ಬಂದಾವೋ ಬಾರವೋ' ಬರೆದದ್ದು 18ನೇ ವಯಸ್ಸಿನಲ್ಲಿ. ವಯಸ್ಸಿಗೆ ಮೀರಿದ ಪ್ರಬುದ್ಧತೆಯನ್ನು ತಮ್ಮ ಕಥೆಗಳಲ್ಲಿ ವ್ಯಕ್ತಪಡಿಸಿದುದರ ಫಲ ಸಾಹಿತ್ಯಕೃಷಿ ನಿರಂತರವಾಗಿ ಸಾಗುತ್ತಾ ಬಂದಿದೆ.

ಸಣ್ಣ ಕಥೆ, ಕಾದಂಬರಿ, ನಾಟಕ, ಸಂಪಾದಿತ ಕೃತಿಗಳು, ಇವುಗಳೊಂದಿಗೆ 'ಸಿರಿಗನ್ನಡ' ಎಂಬ ಕನ್ನಡ ಸಾಹಿತ್ಯದಿಂದ ಆಯ್ದ ಇಂಗ್ಲಿಷ್ ಅನುವಾದಗಳ ಪುಸ್ತಕವನ್ನು ತರುತ್ತಿದ್ದಾರೆ.

ತನ್ನ ಸುತ್ತಮುತ್ತಲಿನ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸುತ್ತ, ಅದನ್ನು ಸಹಜ ಸ್ಥಿತಿಯಲ್ಲಿಯೇ ಕಥೆಯಾಗಿಸುವುದು, ಭಾವಾವೇಗವಿಲ್ಲದ ಭಾಷೆಯಲ್ಲಿಯೇ ಆಳವಾದ ಪರಿಣಾಮಗಳಿಗಾಗಿ ಮೌನವಾಗಿ ಇರುವುದು ಇವರ ಕಥಾ ಶೈಲಿ.

ಅಂಕುರ, ಲಂಗರು, ಹುಲಿ ಸವಾರಿ, ಮತ್ತೊಬ್ಬನ ಸಂಸಾರ ಮತ್ತು ಘಾಚರ್ ಘೋಚರ್ – ಇವರ ಐದು ಕಥಾಸಂಕಲನಗಳು. ಇನ್ನೂ ಒಂದು, ಒಂದು ಬದಿ ಕಡಲು ಮತ್ತು ಊರುಭಂಗ – ಕಾದಂಬರಿಗಳು, ನಾಟಕ ಪ್ರಕಾರದಲ್ಲೂ ಕೈಯಾಡಿಸುವ ವಿವೇಕ ಶಾನಭಾಗರು ಸಕ್ಕರೆ ಗೊಂಬೆ ಮತ್ತು ಬಹುಮುಖಿ ಎಂಬ ನಾಟಕಗಳನ್ನು ಪ್ರಕಟಿಸಿದ್ದಾರೆ. 'ಸಕ್ಕರೆ ಗೊಂಬೆ'ಯು ನೀನಾಸಮ್ ತಿರುಗಾಟದ ಮೂಲಕ ಕರ್ನಾಟಕದ ಅನೇಕ ಊರುಗಳಲ್ಲಿ ಪ್ರದರ್ಶಿಸಲ್ಪಟ್ಟಿದೆ. ಇವರ ಹಲವಾರು ಕಥೆಗಳು ಇಂಗ್ಲೀಷ್ ಮತ್ತು ಇತರ ಭಾರತೀಯ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. ಇವರು ಕಲ್ಕತ್ತಾ, ಅಮೇರಿಕಾ ಮತ್ತು ಇಂಗ್ಲೆಂಡ್‌ನಲ್ಲಿ ಹಲವು ವರ್ಷ ವಾಸವಾಗಿದ್ದರು. ಪ್ರಸ್ತುತ ಬೆಂಗಳೂರಿನಲ್ಲಿದ್ದಾರೆ.

ವಿವೇಕ ಶಾನಭಾಗರ ಕಥೆಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಕಂಡಂತೆ ಏಳು ಅಧ್ಯಾಯಗಳಾಗಿ ವಿಭಾಗಿಸಿ ಅಧ್ಯಯನ ಮಾಡಲು ಉದ್ದೇಶಿಸಲಾಗಿದೆ.

## ಅಧ್ಯಾಯ–1 : ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ :

ಭಾರತದಲ್ಲಿ ಮಾತ್ರವಲ್ಲ, ಪ್ರಪಂಚದಲ್ಲಿರುವ ಯಾವುದೇ ಪತ್ರಿಕೆಗಳನ್ನು ನೋಡಿದರೂ, ಕಥಾಮಯವಾಗಿರುವುದನ್ನು ಕಾಣಬಹುದು. ಸಣ್ಣಕಥೆ, ನೀಳ್ಗಥೆ, ಕಿರುಕಥೆ, ಧಾರಾವಾಹಿ ಕಥೆ, ಹೀಗೆ ಕಥೆಗಳನ್ನು ಪ್ರಕಟಿಸುವುದರಲ್ಲಿ ಪತ್ರಿಕೆಗಳು ಪ್ರಮುಖ ಪಾತ್ರವನ್ನು ವಹಿಸುವುದನ್ನು ಕಾಣಬಹುದು.

ಕಥೆಗಳ ಕಣಜವಾದ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕಥೆ ಹೇಳುವ, ಕೇಳುವ ವಾಡಿಕೆಯಿಂದಾಗಿ, ವಿಪುಲವಾದ ಕಥಾ ಸಾಹಿತ್ಯ ಸೃಷ್ಟಿಯಾಗಿದೆ. ಸಾಹಿತ್ಯದ ಸ್ಥಾನಮಾನ ಅತ್ಯಂತ ಮಹತ್ವದ್ದಾಗಿದೆ. ಆ ಬಗ್ಗೆ ಜಿಜ್ಞಾಸೆ ಅನಗತ್ಯ. ಉತ್ತಮ ಸಮಾಜ ಪರ ಸಾಹಿತ್ಯವನ್ನು ಸೃಷ್ಟಿಸಿದ ಸಾಹಿತಿಯೇ ಹೆಚ್ಚಿನ ಮಹತ್ವದ ವ್ಯಕ್ತಿಯಾಗುವುದು ಸಹಜವೇ ಆಗಿದೆ.

ವೃತ್ತಿ ಹಾಗೂ ಪ್ರವೃತ್ತಿ ಎರಡೂ ಭಿನ್ನವಾಗಿರುವ ಕಾರಣ ವಿವೇಕ ಶಾನಭಾಗರ ಬರವಣಿಗೆ ತನ್ನದೇ ಆದ ವಿಶೇಷತೆಗಳಿಂದ ಕೂಡಿದೆ. ಒಂದು ಪರಂಪರಾನುಗತ ಜೀವನ ಕ್ರಮದೊಳಗೆ ಹೊರಗಿನ ಶಕ್ತಿಗಳು, ಮೌಲ್ಯಗಳು ಪ್ರವೇಶಿಸಿದಾಗ ಆಗುವ ಸಂಕೀರ್ಣ ಪರಿಣಾಮಗಳನ್ನು ಸೂಕ್ಷ್ಮವಾಗಿ ಶೋಧಿಸುವ ವಿವೇಕ ಶಾನಭಾಗರ ಕಥೆಗಳು ತಮ್ಮ ಕಥನ ಶೈಲಿ ಹಾಗೂ ಇತ್ಯಾತ್ಮಕ ಧೋರಣೆಗಳಿಂದ ಓದುಗರನ್ನು ತಮ್ಮತ್ತ ಸೆಳೆದುಕೊಳ್ಳುತ್ತವೆ. ಅವರ ಜೀವಪರ ಮಾನವೀಯ ಒಳನೋಟಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಇವರ ಐದು ಕಥಾ ಸಂಕಲನಗಳನ್ನು (ಅಂಕುರ, ಲಂಗರು, ಹುಲಿಸವಾರಿ, ಮತ್ತೊಬ್ಬನ ಸಂಸಾರ ಮತ್ತು ಫಾಚರ್ ಫೋಚರ್) ಮಾತ್ರ ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಸರಿ ಸುಮಾರು ಇವರೊಂದಿಗೇ ಬರವಣಿಗೆಯನ್ನು ಆರಂಭಿಸಿದ ಅನೇಕ ಕಥೆಗಾರರು ಇನ್ನೂ ಹಳೆಯ ವಿಷಯಗಳ (ಬಾಲ್ಯ, ಗ್ರಾಮೀಣ ಪರಿಸರ, ಮಧ್ಯಮ ವರ್ಗದ ಹಪಹಪಿಗಳು, ನನಸಾಗದ ಕನಸುಗಳು, ಹೆಣ್ಣು ಮಕ್ಕಳ ಗೋಳು)  ಬಗ್ಗೆಯೇ ಬರೆಯುತ್ತಿದ್ದಾರೆ. ಆದರೆ, ವಿವೇಕ ಶಾನಭಾಗರು ಮೊದಲಿನಿಂದಲೂ ತಮ್ಮ ಸುತ್ತ–ಮುತ್ತಲಿನ ಪರಿಸರದಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಸಕಾರಾತ್ಮಕವಾಗಿ ಸ್ಪಂಧಿಸುತ್ತಾ ಆ ಬದಲಾವಣೆಗಳನ್ನು ತಮ್ಮ ಕಥೆಗಳಲ್ಲಿ ಬೇರೆಯವರಿಗಿಂತ ಭಿನ್ನವಾಗಿ ಒಡಮೂಡಿಸುತ್ತಾ ಬಂದಿದ್ದಾರೆ. ಈ ನಿಟ್ಟಿನಲ್ಲಿ 'ಯುಗಧರ್ಮ ಮತ್ತು ಸಂವೇದನೆ'ಯ ವಿಷಯ ಬಂದಾಗ ವಿವೇಕ ಶಾನಭಾಗರು ಎಂದೂ ಹೇಳಿದ್ದನ್ನೇ ಹೇಳುವ ಪ್ರಯತ್ನವನ್ನು ಮಾಡಿಲ್ಲ. ' ಸಂಪ್ರದಾಯ ಕಥೆಗಾರರಂತೆ ದೂರನಿಂತು ವ್ಯಾಖ್ಯಾನ ಮಾಡದೆ ವಿವೇಕ

ಕಥೆಗಳ ಒಳಗೆ ಪ್ರವೇಶಿಸಿ ಬಿಡುತ್ತಾರೆ' ದೇಶ ಕುಲಕರ್ಣಿ. (ಲಂಗರು– ಕಥಾ ಸಂಕಲನದ ಬೆನ್ನುಡಿಯಲ್ಲಿ).

ಸಂಪ್ರದಾಯ, ಶೋಷಣೆ, ತ್ಯಾಗದ ಮೂಕರೋದನೆಯಿಂದ ಹೊರಬಂದು ಸಶಕ್ತರಾಗಿರುವ ಬದಲಾಗುತ್ತಿರುವ ಸ್ತ್ರೀ ಶಕ್ತಿಯನ್ನು ವಿವೇಕ ಶಾನಭಾಗರು ತಮ್ಮ ಕಥೆಗಳಲ್ಲಿ ಗುರುತಿಸಿದ್ದಾರೆ.

ಏನೇನೋ ಹೇಳಬೇಕೆಂದು ಹೊರಡುವ ತರಾತುರಿ ಅವರಿಗಿಲ್ಲ. ಅವರು ಹೇಳುವ ಕ್ರಮದಲ್ಲೇ ಹೇಳಬೇಕಾದುದೂ ಇರುತ್ತದೆ. 'ಇವರ ಕಥೆಗಳು ರಂಜಿಸಿ, ಒಲಿಸಿಕೊಳ್ಳುವ ಬಗೆಯವಲ್ಲ. ಓದಿ, ಅರಿತು, ಧ್ಯಾನಿಸಬೇಕಾದವು' (ನರಹಳ್ಳಿ ಬಾಲಸುಬ್ರಮಣ್ಯ – ಬದುಕಿನ ಅರ್ಥವಂತಿಕೆ ಅನ್ವೇಷಿಸುವ ಹುಲಿ ಸವಾರಿ ಎಂಬ ಲೇಖನದಲ್ಲಿ).

ವಿವೇಕ ಶಾನಭಾಗರ ಕೆಲವು ಕಥೆಗಳನ್ನು ಕನ್ನಡದ ಅನೇಕ ಗಂಭೀರ ವಿಮರ್ಶಕರು ತಮ್ಮ ಒಟ್ಟಾರೆ ಅಧುನಿಕ ಕನ್ನಡ ಕಥಾ ಸಂದರ್ಭದಲ್ಲಿ ವಿಮರ್ಶೆ ಮಾಡಿದ್ದಾರೆ. ಆದರೆ, ಅವರ ಐದೂ ಕಥಾಸಂಕಲನಗಳ ಬಗ್ಗೆ ಏಕ ಕಾಲಕ್ಕೆ ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡುವುದೇ ಈ ಸಂಪ್ರಬಂಧದ ಉದ್ದೇಶವಾಗಿದೆ.

ವಿವೇಕ ಶಾನಭಾಗರು ಸ್ಥಿತ್ಯಂತರವಾಗುತ್ತಿರುವ ಬದುಕನ್ನು ತೆರೆದ ಕಣ್ಣಿನಿಂದ ನೋಡುತ್ತಲೇ ಭವಿಷ್ಯದ ಬಗ್ಗೆ ಅಪಾರವಾದ ಭರವಸೆಯನ್ನು ಹೊಮ್ಮಿಸುತ್ತಾರೆ. ಜಯಂತ್ ಕಾಯ್ಕಿಣಿಯವರ ಮಾತನ್ನು ನೆನಪಿಸಿಕೊಳ್ಳುವುದಾದರೆ, 'ಭಾಷೆಯೆಂಬ ಇಂದ್ರಿಯಕ್ಕೂ ನಿಲುಕದ ನಾದಗಳಿಗೆ ತನ್ನ ಚೇತನವನ್ನು ಸದಾ ಹುರಿಗೊಳಿಸಿಕೊಂಡಿರುವ ಹುರುಪಿನ ಜೀವಿ ವಿವೇಕ ಶಾನಭಾಗ'.

ಈ ಸಂಪ್ರಬಂಧದಲ್ಲಿ ಒಟ್ಟಾರೆಯಾಗಿ ವಿವೇಕ ಶಾನಭಾಗರ ಮೂವತ್ತೇಳು ಕಥೆಗಳನ್ನು, ಅವುಗಳು ಪ್ರತಿಪಾದಿಸುವ ಜೀವನ ದರ್ಶನದ ಹಿನ್ನೆಲೆಯಲ್ಲಿ ವಿಮರ್ಶಾತ್ಮಕವಾಗಿ ಈ ಕೆಳಕಂಡಂತೆ ಅಭ್ಯಾಸ ಮಾಡಲಾಗುವುದು.

1. ವಿವೇಕ ಶಾನಭಾಗರ ಕಥೆಗಳಲ್ಲಿ ಅಂತರಂಗದ ತುಡಿತ

2. ವಿವೇಕ ಶಾನಭಾಗರ ಕಥೆಗಳಲ್ಲಿ ಜಾಗತೀಕರಣದ ಸವಾಲುಗಳು

3. ವಿವೇಕ ಶಾನಭಾಗರ ಕಥೆಗಳಲ್ಲಿ ಮನುಷ್ಯ ಸಂಬಂಧಗಳ ಸಂಕೀರ್ಣತೆ ಮತ್ತು ಸಾಮಾಜಿಕ ಕಳಕಳಿ

4. ವಿವೇಕ ಶಾನಭಾಗರ ಕಥೆಗಳಲ್ಲಿನ ಸ್ತ್ರೀ ಪಾತ್ರಗಳು

ಇವರ ಮೊದಲ ಸಣ್ಣ ಕಥಾಸಂಕಲನ 'ಅಂಕುರ' 1985 ರಲ್ಲಿ ಪ್ರಕಟವಾಯಿತು. ವಯೋ ಸಹಜ ಕುತೂಹಲ, ಅಸ್ಪಷ್ಟಗಳು ಮನೆ ಮಾಡಿರುವ ಮನಸ್ಸು, ಪರಸ್ತ್ರೀ ಬಗ್ಗೆ ಕೌತುಕದಿಂದ ಆಲೋಚಿಸುವ ಕಥೆಗಳು, ಈ ಕಥಾಸಂಕಲನದಲ್ಲಿವೆ. ನವ್ಯ ಸಾಹಿತ್ಯದ ಪ್ರಭಾವಳಿ ಈ ಕಥಾ ಸಂಕಲನದಲ್ಲಿ ಎದ್ದು ಕಾಣುತ್ತದೆ. ಈ ಕಥಾ ಸಂಕಲನದಲ್ಲಿ ಒಟ್ಟು ಆರು ಕಥೆಗಳಿವೆ.

ಹತ್ತು ಕಥೆಗಳನ್ನು ಹೊಂದಿರುವ 'ಲಂಗರು' ಕಥಾ ಸಂಕಲನ 1992 ರಲ್ಲಿ ಪ್ರಕಟವಾಯಿತು. ವ್ಯಕ್ತಿ ಮತ್ತು ಅವನ ಕೌಟುಂಬಿಕ ಸಂಬಂಧಗಳು, ಕುಟುಂಬ ನಿರ್ವಹಣೆಯ ವಿವಿಧ ಹಾದಿಗಳು, ಬದುಕನ್ನು ಅನುಭವಿಸುವ ರೀತಿ, ಅದನ್ನು ರೂಪಿಸಿದ ಸಮುದಾಯದ ಆಕೃತಿ ಇತ್ಯಾದಿ ಸಂಗತಿಗಳು ಈ ಕಥಾಸಂಕಲನದಲ್ಲಿ ಒಡಮೂಡಿವೆ.

1995 ರಲ್ಲಿ ಪ್ರಕಟಗೊಂಡ 'ಹುಲಿ ಸವಾರಿ' ಕಥಾ ಸಂಕಲನ ಭಾರತೀಯ ಸಮಾಜದ ಆಧುನಿಕತೆ ಮತ್ತು ಜಾಗತೀಕರಣದ ಪರಿಣಾಮಗಳನ್ನು ಅತ್ಯಂತ ಸಮರ್ಥವಾಗಿ ಒಳಗೊಂಡ ಕೃತಿ.

ಜನಸಂಖ್ಯಾಸ್ಫೋಟದಿಂದ ನರಳುತ್ತಿರುವ ಭಾರತದಂತಹ ದೊಡ್ಡರಾಷ್ಟ್ರದಲ್ಲಿ, ವಿದೇಶಿ ಬಂಡವಾಳದ ಪರಿಣಾಮ ಕಳೆದೆರೆಡು ದಶಕಗಳಲ್ಲಿ ಭಾರತದಲ್ಲಿ ಆಗುತ್ತಿರುವ ಪ್ರಗತಿ ಮತ್ತು ಆ'ಪ್ರಗತಿ'ಯ ಉಪಪ್ರಮೇಯಗಳಾದ ಬೃಹತ್ ಅಣೆಕಟ್ಟುಗಳು, ಅಣುಸ್ಥಾವರಗಳು ಮುಂತಾದ ಸಂಗತಿಗಳನ್ನು ಸ್ಥೂಲವಾಗಿ ಆಧುನಿಕೋತ್ತರ ಎಂದು ಗುರುತಿಸಬಹುದಾದ ವೈಚಾರಿಕತೆಯ ನಿಲುವಿನಿಂದ ಈ ಕಥಾಸಂಕಲನದ ಕಥೆಗಳು ವಿಶ್ಲೇಷಿಸುತ್ತವೆ ಹಾಗೂ ಪ್ರಶ್ನಿಸುತ್ತವೆ.

'ಹುಲಿ ಸವಾರಿ' ಪ್ರಕಟವಾದ ಹತ್ತು ವರ್ಷಗಳ ನಂತರ (2005) ರಲ್ಲಿ ಪ್ರಕಟವಾದ ಕಥಾಸಂಕಲನ – ಮತ್ತೊಬ್ಬನ ಸಂಸಾರ. ಸಾಮಾಜಿಕ ಬದುಕಿನಲ್ಲಿ ಎದುರಾಗುವ ವ್ಯಕ್ತಿಗಳ ಪ್ರಾಮುಖ್ಯತೆ, ಅವರ ಮಹತ್ವಾಕಾಂಕ್ಷೆ, ಸೋಲು, ಹತಾಶೆ ಇತ್ಯಾದಿ ಅಂಶಗಳು ನಮ್ಮ ಕಣ್ಣ ಮುಂದೆ ಸಮಕಾಲೀನ ಸಮಾಜವನ್ನು ತೆರೆದಿಡುತ್ತವೆ.

ಅವಿಭಕ್ತ ಕುಟುಂಬದ ಸದಸ್ಯರು, ಅವರ ನಿರೀಕ್ಷೆಗಳು, ಕಾಫಿ ಹೌಸ್‌ನ ವೇಟರ್ ವಿನ್ಸೆಂಟ್‌ನ ಪಾತ್ರ, ಸಾವಿನ ಅಂಚಿನಲ್ಲಿ ನಿಂತು ಇದುವರೆಗೆ ಬಾಳಿದ ಬದುಕಿನ ಅವಲೋಕನ ಮಾಡುವ ಮನಸ್ಥಿತಿಯ ಚಿತ್ರಣ (ವಿಚಿತ್ರ ಕತೆ), ಇನ್ನೂ ಅನೇಕ ಸಂಗತಿಗಳು ಈ ಕಥಾಸಂಕಲನದಲ್ಲಿ ಅಡಕವಾಗಿವೆ.

ಒಟ್ಟಾರೆಯಾಗಿ ವಿವೇಕ ಶಾನಭಾಗರು ಪ್ರತಿಪಾದಿಸುವ ಜೀವನ ದರ್ಶನದ ಹಿನ್ನೆಲೆಯಲ್ಲಿ ಅವರ ಕಥೆಗಳು ನೀಡುವ ಸಹಜ ಒಳನೋಟಗಳನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗುವುದು.

## ಅಧ್ಯಾಯ-2 : ಕನ್ನಡದ ಸಣ್ಣಕಥೆಗಳ ಸ್ವರೂಪ ಮತ್ತು ಉದ್ದೇಶ

ಮನುಷ್ಯ ಜೀವನದೊಂದಿಗೆ ಕಥೆಯೂ ಆರಂಭವಾಗಿರಬೇಕು. ಅನುಭವಗಳೊಂದಿಗೆ ಹೆಣೆದುಕೊಂಡಿರುವ ಸಣ್ಣಕಥೆಗಳು ಸಾಹಿತ್ಯ ಪ್ರಕಾರವಾಗಿ ಬೆಳೆದು ಇಡೀ ವಿಶ್ವದಲ್ಲಿ ಜನಜನಿತವಾಗಿವೆ.

ಸರ್ವ ಸಾಹಿತ್ಯದ ತಾಯಿಬೇರು- ಜನಪದ ಕಥೆಗಳು. ಇವೇ ವಿಶ್ವದ ಮೊದಲ ಕಥೆಗಳಾಗಿವೆ. ಈ ರೀತಿಯ ಜನಪದ ಕಥೆಗಳು ಎಲ್ಲಾ ಭಾಷೆಗಳಲ್ಲಿಯೂ ಈವೆ. ಸಣ್ಣ ಕಥಾಲೋಕ ಭಾರತೀಯ ಸಾಹಿತ್ಯ ಮತ್ತು ಕನ್ನಡಕ್ಕೆ ಹೊಸದೇನಲ್ಲ. ಎಲ್ಲರಿಗೂ ತಿಳಿದಿರುವಂತೆ ಉಪನಿಷತ್ತಿನ ಕಥೆಗಳು, ನೀತಿ ಕಥೆಗಳು, ಜಾತಕದ ಕಥೆಗಳು, ಭಾರತದ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದ ಕಥೆಗಳು, ಎಲ್ಲರ ಮನಸೂರೆಗೊಳ್ಳುವ, ಕುತೂಹಲಕಾರಿಯಾದ ಚರಿತ್ರೆಯಿರುವ ಐವತ್ತಕ್ಕೂ ಹೆಚ್ಚು ಭಾಷೆಗಳಿಗೆ ತರ್ಜುಮೆಗೊಂಡಿರುವ 'ಪಂಚತಂತ್ರ'ದ ಕಥೆಗಳು ಇವೆ.

ಇಷ್ಟಿದ್ದೂ ಸಹ ಸಾಹಿತ್ಯದ ಒಂದು ವಿಶಿಷ್ಟ ರೂಪವಾಗಿ ಸಣ್ಣಕಥೆ ರೂಪ ತಾಳಿದ್ದು, ಪಾಶ್ಚಾತ್ಯರಲ್ಲಿ. ಇಂಗ್ಲೆಂಡಿನಲ್ಲಿ ಸಣ್ಣಕಥೆ ಏಳನೆಯ ಅಥವಾ ಎಂಟನೆಯ ಶತಮಾನದಲ್ಲಿ ಆರಂಭವಾಯಿತೆಂದು ಹೇಳಿದರೂ ಸಣ್ಣಕಥೆ ಅಲ್ಲಿ ಸರಿಯಾಗಿ ಕಾಲೂರಿದ್ದು, ಹದಿನಾರನೇ ಶತಮಾನದಲ್ಲಿ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಮನರಂಜನೆಗಾಗಿ ಕಥೆಯನ್ನು ಹೇಳುವ ವಾಡಿಕೆ ಕೆಲವು ರಾಷ್ಟ್ರಗಳಲ್ಲಿ ಈಗಲೂ ಇದೆ. ಹೇಳುವ ಮಾಧ್ಯಮ, ಬರೆಯುವ ಮಾಧ್ಯಮವಾದಾಗ ಅದು ಇನ್ನಷ್ಟು ಪರಿಣಾಮಕಾರಿಯಾಗಬೇಕಾಯಿತು. ಅಕ್ಷರದಲ್ಲಿ ಮೂಡಿದ ಜಗತ್ತಿನ ಕಥೆಗೆ ಸುದೀರ್ಘ ಇತಿಹಾಸವಿದೆ. ಜಗತ್ತಿನ ಎಲ್ಲಾ ರಾಷ್ಟ್ರಗಳಲ್ಲೂ ಕಥೆಗಳು ಹೇರಳವಾಗಿರುವುದನ್ನು ಮತ್ತು ಅಕ್ಷರಲೋಕದ ಈ ಕಥೆಗಳಿಗೆ ಸುಧೀರ್ಘ ಇತಿಹಾಸವಿರುವುದನ್ನು ಸಾಹಿತ್ಯ ಚರಿತ್ರಕಾರರು ಗುರುತಿಸಿದ್ದಾರೆ.

19ನೇ ಶತಮಾನದ ನಂತರ ಇಡೀ ವಿಶ್ವದಲ್ಲಿಯೇ ಸಣ್ಣಕಥಾ ಪ್ರಪಂಚ ವಿಸ್ತಾರವಾಗುತ್ತಾ, ಬೆಳೆಯುತ್ತಾ ಹೋಯಿತು.

ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಎಡ್ಗರ್ ಅಲೆನ್ ಪೋ ಮತ್ತು ಹಾಥ್ನಾರ್ ಬಂದನಂತರ ಸಣ್ಣ ಕಥೆಗಳಿಗೆ ವಿಶೇಷ ಮಾನ್ಯತೆ ದೊರೆಯತೊಡಗಿತು. ರಷ್ಯಾದಲ್ಲಿ ಹದಿನೆಂಟನೆಯ ಶತಮಾನಗಲ್ಲಿ, ಫ್ರಾನ್ಸ್‌ನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಸಣ್ಣಕಥೆಗಳು ಹುಟ್ಟಿಕೊಂಡವು. ಈ ಹಿನ್ನೆಲೆಯಲ್ಲಿ ಆಧುನಿಕ ಸಣ್ಣಕಥೆಗೆ ಸುಮಾರು ಒಂದೂವರೆ-ಎರಡು ಶತಮಾನಗಳಷ್ಟು ದೀರ್ಘ ಇತಿಹಾಸವಿದೆ.

ಮಾತು ಮಾತು ಮಥಿಸಿ, ಅಕ್ಷರಗಳ ರೂಪದಿ ಓದುಗರ ಮನದಲ್ಲಿ ಚಿಂತನೆಯ ಚಲನೆಯನ್ನು ಉತ್ತೇಜಿಸುವ ಸಣ್ಣ ಕಥೆಗಳು ಜೀವನದ ಅನುಭವ ದ್ರವ್ಯವನ್ನು ಒಳಗೊಂಡಿರುತ್ತವೆ. ವಸಾಹತುಶಾಹಿಯ ಪ್ರಭಾವ, ಇಂಗ್ಲೀಷ್ ಶಿಕ್ಷಣ ಮತ್ತು ಮುದ್ರಣ ಯಂತ್ರಗಳ ಬಳಕೆ ಭಾರತದಲ್ಲಿ ಕ್ರಾಂತಿಯನ್ನು ಉಂಟುಮಾಡಿತು.

ಭಾರತದಲ್ಲಿ ಮೊದಲ ಸ್ವತಂತ್ರ ಸಾಹಿತ್ಯ ರಚನೆಗೆ ಸಜ್ಜಾದದ್ದು ಬಂಗಾಳ ಸಾಹಿತ್ಯ. ಮೊದಮೊದಲಿಗೆ ಈ ಭಾರತೀಯ ಸಾಹಿತ್ಯವು ಅನುವಾದ, ಅನುಕರಣ, ಪರಿಷ್ಕರಣ, ಮೊದಲ್ಗೊಂಡು, ಅನಂತರ ಸ್ವತಂತ್ರ ನಿರ್ಮಾಣವಾಗಿ ಹಂತ ಹಂತವಾಗಿ ಕಾಣಿಸಿಕೊಂಡಿತು. ಈ ಮಾತುಗಳು ಎಲ್ಲಾ ಪ್ರಾಂತ್ಯದ ದೇಶ–ಭಾಷೆಗಳಿಗೂ ಸಲ್ಲುತ್ತದೆ.

ಕನ್ನಡದಲ್ಲಿ ಕಥಾಗದ್ಯ ಎಂದುಸ್ಪಷ್ಟವಾಗಿ ಗುರುತಿಸುವುದಕ್ಕಿಂತ ಮೊದಲು ಇದ್ದದ್ದು ಕಾವ್ಯ ಕೃತಿಗಳು, ಗದ್ಯ ಪದ್ಯಗಳೆರಡನ್ನೂ ತನ್ನೊಡಲಲ್ಲಿ ಇಟ್ಟುಕೊಂಡ ಚಂಪೂ ಕೃತಿಗಳು. ಕಾವ್ಯಗಳಲ್ಲಿ, ಚಂಪೂ ಕೃತಿಗಳಲ್ಲಿ ಕಥೆಗಳು ಅಡಕವಾಗಿರುತ್ತಿದ್ದ ಕಾರಣಕ್ಕೆ ಅವು ಸಾಮಾನ್ಯ ಜನರ ಮನದಲ್ಲಿ ಉಳಿದಿದ್ದ ಉದಾಹರಣೆಗಳೂ ಇವೆ.

ಕ್ರಿ.ಶ. 920 ರಲ್ಲಿ ಶಿವಕೋಟ್ಯಚಾರ್ಯರಿಂದ ರಚಿತವಾಗಿದೆಯೆಂದು ನಂಬಲಾಗಿರುವ 'ವಡ್ಡಾರಾಧನೆ' ಕೃತಿ ಇಂದಿಗೂ ತನ್ನ ವಿಭಿನ್ನ ಕಥೆಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ಮೊದಲ 'ಕಥಾಗದ್ಯ' ವೆಂದು ಪರಿಗಣಿಸಲ್ಪಟ್ಟಿದೆ.

ಕನ್ನಡದಲ್ಲಿ ಆಧುನಿಕ ಕಥಾ ಪ್ರಕಾರಕ್ಕೆ ಇರುವ ಇತಿಹಾಸ ಅಷ್ಟೊಂದು ದೀರ್ಘವಾದದ್ದಲ್ಲ. ಕೇವಲ ನೂರು ವರ್ಷಗಳ ಇತಿಹಾಸ. ಈ ಅಲ್ಪಾವಧಿಯಲ್ಲಿಯೇ ಕನ್ನಡ ಕಥಾ ಜಗತ್ತು ಸಾಕಷ್ಟು ವಿಸ್ತಾರಕ್ಕೆ ಹಿಗ್ಗಿದೆ. ಆಳ–ಎತ್ತರಗಳಿಗೆ ಮೈಚಾಚಿಕೊಂಡಿದೆ.

ಕನ್ನಡದ ಕಥೆಗಾರರು ಈ ಪ್ರಕಾರದಲ್ಲಿ ತಮ್ಮನ್ನು ತೊಡಗಿಸಿಕೊಂಡ ರೀತಿ, ನಡೆಸಿದ ಪ್ರಯೋಗಗಳು ಸೋಜಿಗ ಹುಟ್ಟಿಸುವಷ್ಟು ಮಹತ್ವವನ್ನು ಪಡೆದುಕೊಂಡಿವೆ. ಇದರಿಂದಾಗಿಯೇ ಕನ್ನಡದ ಈ ಸಾಹಿತ್ಯ ಪ್ರಕಾರ ಶ್ರೀಮಂತವಾಗಿ, ವೈವಿಧ್ಯಮಯವಾಗಿದೆ. ಇವತ್ತಿಗೂ ಹೆಚ್ಚು ಕ್ರಿಯಾಶೀಲವಾಗಿ ಜೀವಂತಿಕೆಯನ್ನು ಚಿಮ್ಮಿಸುತ್ತದೆ.

1842 ರಲ್ಲಿ ಆರಂಭವಾದ ಮಂಗಳೂರಿನ ಬಾಸೆಲ್ ಮಿಷನ್ ಮುದ್ರಣಾಲಯ ಕನ್ನಡ ನಾಡಿನಲ್ಲಿ ಕ್ರಾಂತಿಯನ್ನು ಮಾಡಿತು. ಅನಂತರ ಆರಂಭವಾದ ಕನ್ನಡದ ಪ್ರಥಮ ಪತ್ರಿಕೆ 'ಮಂಗಳೂರು ಸಮಾಚಾರ' ವನ್ನು ಬಾಸೆಲ್ ಮಿಷನ್ 1842ನೇ ಜುಲೈ ಒಂದರಂದು ಆರಂಭಿಸಿತು. ಇಲ್ಲಿಂದ ಬೇರೆ ಬೇರೆ ರೀತಿಯ ಕನ್ನಡ ಪುಸ್ತಕಗಳು ಪ್ರಕಟವಾಗತೊಡಗಿದವು.

ನವೋದಯದ ಪೂರ್ವಘಟ್ಟದಲ್ಲಿಯೇ ಆಧುನಿಕ ಕಾವ್ಯ, ಸಣ್ಣಕಥೆ ಮತ್ತು ಕಾದಂಬರಿಗಳು ಕನ್ನಡದಲ್ಲಿ ಅಂಕುರವಾದವು. ಕನ್ನಡದ ಕಾದಂಬರಿಯಲ್ಲಿ ಆಧುನಿಕ ಎನ್ನಬಹುದಾದ ಸೃಜನಾತ್ಮಕ ಕ್ರಿಯೆಗಳನ್ನು ನಾವು ಗುಲ್ವಾಡಿ ವೆಂಕಟರಾಯರ 'ಇಂದಿರಾ' (1899), ಎಂ.ಎಸ್.ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' (1916), ವೆಂಕಟರಮಣ ಕರ್ಕಿಯವರ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' (1885), ಬಾಬುರಾಯರ 'ವಾಗ್ದೇವಿ' (1905) ಮುಂತಾದ ಕೃತಿಗಳಲ್ಲಿ ಗುರುತಿಸಬಹುದಾಗಿದೆ.

ಸಣ್ಣಕಥಾ ಪ್ರಕಾರ ಭಾರತೀಯ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದೆ. ಕನ್ನಡ ನಾಡಿನಲ್ಲಿ 1900ರಲ್ಲಿ ಸಣ್ಣಕಥೆಗಳ ರಚನೆಗೆ ಮೊದಲಿಗರಾದವರು ಮಂಗಳೂರಿನ ಪಂಜೆ ಮಂಗೇಶರಾಯರು. 1900ರಲ್ಲಿ ಸುವಾಸಿನಿ ಮಾಸಪತ್ರಿಕೆಯಲ್ಲಿ ಮೊದಲಿಗೆ 'ಕಮಲಪುರದ ಹೋಟ್ಲಿನಲ್ಲಿ', 'ಭಾರತ–ಶ್ರವಣ', 'ನನ್ನ ಚಿಕ್ಕತಾಯಿ', 'ನನ್ನ ಚಿಕ್ಕ ತಂದೆಯ ಉಯಿಲ್' ಕಥೆಗಳು ಪ್ರಕಟವಾದವು.

ನಂತರ ಉತ್ತರ ಕರ್ನಾಟಕದ ತಡಿಯಲ್ಲಿ ಕೆರೂರು ವಾಸುದೇವಾಚಾರ್ಯರ ಕಥೆಗಳು ಸುಚಿತ್ರ ಭಾರತ ಮಾಸಪತ್ರಿಕೆಯಲ್ಲಿ 'ಮಲ್ಲೇಶಿಯ ನಲ್ಲೆಯರು', 'ತೊಳೆದ ಮುತ್ತು', 'ಪ್ರಕೃತಿ ಬಲ', 'ಕರಿಗಾಲಿನ ಗಿರಿರಾಯರು' ಮುಂತಾದ ಕಥೆಗಳು ಪ್ರಕಟವಾದವು.

ಸಣ್ಣಕಥೆಗಳ ರಚನೆಗೆ ಖಚಿತವಾದ ರೂಪ ಮತ್ತು ಸಮಗ್ರತೆ ದೊರಕಿದ್ದು, ಮಾಸ್ತಿಯವರಿಂದ ಅಂದರೆ ತಪ್ಪಾಗಲಾರದೇನೋ.

1920ರಲ್ಲಿ ಮಾಸ್ತಿಯವರು ಪ್ರಕಟಿಸಿದ 'ಕೆಲವು ಸಣ್ಣಕಥೆಗಳು' ಕನ್ನಡ ಸಾಹಿತ್ಯದಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿದವೆಂದು ಹೇಳಬಹುದು.

ಮಾಸ್ತಿಯವರಿಗೆ ಕಥೆ ಹೇಳುವ, ಕಥೆ ಕಟ್ಟುವ ಕಲೆ ಚೆನ್ನಾಗಿ ಗೊತ್ತಿದ್ದರಿಂದ ಸಣ್ಣಕಥೆಗಳನ್ನೇ ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ಮಾಡಿಕೊಂಡರು. ತಾವು ಕಂಡ ಭಾರತೀಯ ಪರಂಪರೆಯ ಜೀವನಾನುಭವಗಳನ್ನು ತುಂಬಿ, ಸಣ್ಣಕಥೆಗಳಿಗೆ ಇರಬಹುದಾದ ಧ್ವನಿಶಕ್ತಿ ಮತ್ತು ಸಾಮರ್ಥ್ಯಗಳನ್ನು ಎತ್ತಿ ತೋರಿಸಿದರು.

ಇವರ ಕಥೆಗಳಲ್ಲಿ ಕಂಡುಬರುವ ಅಪಾರ ವಸ್ತು ವೈವಿಧ್ಯ, ಪಾತ್ರ ವೈವಿಧ್ಯ, ನಿರೂಪಣಾ ತಂತ್ರ ಅತ್ಯಂತ ಕುತೂಹಲ ಕೆರಳಿಸುವಂತಹದ್ದು. ಮೊದಲ ತಲೆಮಾರಿನ ವಿದ್ಯಾವಂತ ವರ್ಗದಿಂದ ಬಂದ ಮಾಸ್ತಿಯವರು ತಮ್ಮ ಹಿಂದಿನ ಕಥೆಗಾರರಲ್ಲಿ ಮತ್ತು ಮುಂದಿನ ಕಥೆಗಾರರಲ್ಲಿ ಅಷ್ಟಾಗಿ ಕಂಡು ಬರದ ವಿಶೇಷ ಮಾದರಿಗಳೆಂದೇ ಹೇಳಬಹುದು. ಈ ಮಾದರಿಗಳನ್ನು 'ಮಾಸ್ತಿಯ ಸ್ಪೆಷಲ್ ಮಾದರಿ' ಎಂದು ಕರೆಯಬಹುದು.

ಈಗಾಗಲೇ ಭಾರತೀಯ ಬದುಕಿನಲ್ಲಿ ವಸಾಹತುಶಾಹಿ ಪ್ರಭಾವ ಮತ್ತು ಪ್ರೇರಣೆಗಳಿಂದಾಗಿ ಹಲವಾರು ಬದಲಾವಣೆಗಳು ದೇಶದಾದ್ಯಂತ ಸಂಭವಿಸುತ್ತಾ, ಭಾರತೀಯ ಪರಂಪರೆ ಮತ್ತು ಸಂಸ್ಕೃತಿಗಳು ತಲ್ಲಣಗಳನ್ನು ಅನುಭವಿಸುತ್ತಿದ್ದವು. ಇದರ ಪರಿಣಾಮ ಭಾರತೀಯರಲ್ಲಿ ಜಾಗೃತ ಪ್ರಜ್ಞೆಯನ್ನು ಮೂಡಿಸುವ ಕೆಲಸಗಳು ಅಲ್ಲಲ್ಲಿ ನಡೆದಿದ್ದವು. ಮಾಸ್ತಿಯವರ ಸಾಹಿತ್ಯ ಅಂತಹ ಭಾರತೀಯ ಪ್ರಜ್ಞೆಯನ್ನು ಮೂಡಿಸುತ್ತಿತ್ತು. ಯಾರಿಗೂ ಕೆಡುಕನ್ನು ಉಂಟುಮಾಡದ ಧಾರ್ಮಿಕ ಶ್ರದ್ಧೆ ಮಾಸ್ತಿಯವರ ಕಥೆಗಳ ಸ್ಥಾಯಿ ಭಾವ. ಮಾನವನ ಮನಸ್ಸು ನಿಧಾನವಾಗಿ ಮಾಗಿ ಹಣ್ಣಾಗುತ್ತಾ ಪರಿವರ್ತನೆ ಹೊಂದುತ್ತಾ, ಬದುಕಿಗೊಂಡು ಅರ್ಥ ಮತ್ತು ಗುರಿ ತಂದುಕೊಡುತ್ತದೆ ಎಂಬುದು ಮಾಸ್ತಿಯವರ ಅಚಲವಾದ ನಂಬಿಕೆ. ಇವರ ಕಥೆಗಳಲ್ಲಿ ಭಾರತೀಯ ಸಂಸ್ಕೃತಿ, ಪರಂಪರೆ, ಬದುಕು, ಜೀವನ, ಪ್ರೀತಿ ಅಪಾರವಾಗಿ ಕಾಣಿಸಿಕೊಂಡಿದೆ. ಮಾಸ್ತಿಯವರು ಸುಮಾರುಒಂದು  ನೂರು ಕಥೆಗಳನ್ನು ಬರೆದಿದ್ದಾರೆ.

ರಂಗಪ್ಪನ ದೀಪಾವಳಿ, ರಂಗನ ಮದುವೆ, ರಂಗಪ್ಪನ ಕೋರ್ಟ್‌ಷಿಪ್, ಇಲ್ಲಿಯ ತೀರ್ಪು, ವಸುಮತಿ, ಕಾಮನ ಹಬ್ಬದ ಒಂದು ಕಥೆ, ನಿಜಗಲ್ಲಿನ ರಾಣಿ, ವೆಂಕಶಾಮಿಯ ಪ್ರಣಯ, ಜೋಗ್ಯೋರ ಅಂಜಪ್ಪನ ಕೋಳಿಕಥೆ, ಮೊಸರಿನ ಮಂಗಮ್ಮ, ಅಚಾರ್ಯರ ಪತ್ನಿ, ಗೌತಮಿ ಹೇಳಿದ ಕಥೆ, ವೆಂಕಟಿಗನ ಹೆಂಡತಿ, ಮೇಲೂರಿನ ಲಕ್ಷ್ಮಮ್ಮ, ಇತ್ಯಾದಿ ಅವರ ಕೆಲವು ಅತ್ಯುತ್ತಮ ಹಾಗೂ ಬಹು ಚರ್ಚಿತ ಕಥೆಗಳಾಗಿವೆ.

ನವೋದಯದ ಕಾಲದಲ್ಲಿ ಅನೇಕ ಉತ್ತಮ ಸಣ್ಣ ಕಥೆಗಾರರು ಕನ್ನಡ ಸಾಹಿತ್ಯದಲ್ಲಿ ಬೆಳಗಿದ್ದಾರೆ. ಮಾಸ್ತಿಯವರು ಸುಮಾರು ಹದಿನೈದು ಕಥಾಸಂಕಲಗಳನ್ನು ಪ್ರಕಟಿಸಿ, ಅನೇಕರಿಗೆ ಸ್ಫೂರ್ತಿದಾಯಕರಾಗಿದ್ದರು.

ಮಹಿಳೆಯರೂ ಸಹ ಬರೆಯಲು ತೊಡಗಿದ್ದನ್ನು ನಾವಿಲ್ಲಿ ಮರೆಯುವ ಹಾಗಿಲ್ಲ. ಕೊಡಗಿನ ಗೌರಮ್ಮ ಮತ್ತು ಸರಸ್ವತಿ ಬಾಯಿ ರಾಜವಾಡೆಯವರು (ಗಿರಿಬಾಲೆ) ಈ ಕಾಲದ ಹೆಸರಿಸಬಹುದಾದ ಇಬ್ಬರು ಕಥೆಗಾರ್ತಿಯರು. ಅಸ್ಪೃಶ್ಯತೆ, ಮಕ್ಕಳಾಗದಿರುವ ಹೆಣ್ಣುಮಕ್ಕಳ ದುರಂತ, ವೇಶ್ಯಾ ಸಮಸ್ಯೆ, ವರದಕ್ಷಿಣೆ, ಬಹಿಷ್ಕಾರ ಮುಂತಾದುವುಗಳ ಬಗ್ಗೆ ದಿಟ್ಟವಾಗಿ ಭಾವುಕತೆಯಿಂದ ಬರೆಯಬಲ್ಲ ರಾಜವಾಡೆಯವರ ಮೊದಲ ಕಥಾಸಂಕಲನ 'ಆಹುತಿ' (1928).

ಬದುಕನ್ನು ನೋಡುವ ಮತ್ತು ಅದನ್ನು ಮಂಡಿಸುವ ದೃಷ್ಟಿಯಿಂದ ಗೌರಮ್ಮನವರು ನಮ್ಮ ಗಮನವನ್ನು ಸೆಳೆಯುತ್ತಾರೆ. 'ಕಂಬನಿ' ಮತ್ತು 'ಚಿಗುರು' (1942) ಅವರ ಕಥಾಸಂಕಲನಗಳು.

ಕನ್ನಡದ ಆ ಕಾಲದ ಪ್ರಮುಖ ಬರಹಗಾರರೆಲ್ಲರೂ ಈ ಹೊಸ ಪ್ರಕಾರಕ್ಕೆ ಒಲಿದದ್ದು ಮತ್ತು ಅದನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳಲು ಪ್ರಯತ್ನ ನಡೆಸಿದ್ದನ್ನು ನಾವು ಕಾಣಬಹುದಾಗಿದೆ. ಮುಂದೆ ಕಾದಂಬರಿಕಾರರಾಗಿಯೇ ಹೆಚ್ಚು ಮನ್ನಣೆ ಪಡೆದ ಕೋಟ ಶಿವರಾಮ ಕಾರಂತ, ದೇವುಡು ಮತ್ತು ಅ.ನ.ಕೃ. ರಾಷ್ಟ್ರಕವಿ ಎಂದು ಕನ್ನಡಿಗರು ಮೆಚ್ಚಿದ ಕುವೆಂಪು, ಕವಿಯೆಂದು ಮಾನ್ಯತೆ ಪಡೆದ ಕಡೆಂಗೋಡ್ಲು ಶಂಕರಭಟ್ಟ ಮತ್ತು ಪೇಜಾವರ ಸದಾಶಿವರಾಯ, ಬೇರೆ ಬೇರೆ ಕಾರಣಗಳಿಗಾಗಿ ಪ್ರಸಿದ್ಧರಾದ ಜಿ.ಪಿ.ರಾಜರತ್ನಂ, ಎಂ.ವಿ.ಸೀತಾರಾಮಯ್ಯ, ನವರತ್ನ ರಾಮರಾವ್ ಹಾಗೂ ಕಥೆಗಾರರಾಗಿಯೇ ಉಳಿದ ಆನಂದ, ಭಾರತೀಪ್ರಿಯ ಮತ್ತು ಇನ್ನೂ ಅನೇಕ ಮುಖ್ಯ ಬರಹಗಾರರು ಕಥಾ ಪ್ರಪಂಚಕ್ಕೆ ಕಾಲಿಟ್ಟು ನಡೆಸಿದ ಪ್ರಯೋಗಗಳು ಇಂದಿಗೂ ದೇದೀಪ್ಯಮಾನವಾಗಿವೆ.

ಸಣ್ಣಕಥೆಗಳ ಕ್ಷೇತ್ರದಲ್ಲಿ ಆಧುನಿಕ ಕನ್ನಡ ಸಾಹಿತ್ಯ ಶ್ರೀಮಂತವಾಗಿದೆ. ಯಾವುದೇ ಭಾಷೆಯ ಶ್ರೇಷ್ಠ ಸಣ್ಣಕಥೆಗಳ ಸಾಲಿನಲ್ಲಿ ನಿಲ್ಲಬಲ್ಲಂತಹ ಅನೇಕ ಕಥೆಗಳು ಕನ್ನಡದಲ್ಲಿ ಬಂದಿವೆ. ಮತ್ತು ಇವು ವಸ್ತು ಹಾಗೂ ಕಥನ, ತಂತ್ರಗಳು ಇವೆರಡೂ ನೆಲೆಗಳಲ್ಲಿಯೂ ಅಗಾಧ ವೈವಿಧ್ಯತೆಯನ್ನು ದರ್ಶಿಸುತ್ತವೆ.

ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ, ದಲಿತ, ಮಹಿಳಾ ಸಾಹಿತ್ಯ, ಇತ್ಯಾದಿ ಎಲ್ಲ ಚಳುವಳಿಗಳ ಕಾಲಘಟ್ಟದಲ್ಲೂ 'ಸಣ್ಣಕಥೆ' ತನ್ನ ವೈಶಿಷ್ಟ್ಯತೆಯನ್ನು ಮೆರೆದಿದೆ.

ಸೇಡಿಯಾಪು ಕೃಷ್ಣಭಟ್ಟ, ಗೊರೂರು ರಾಮಸ್ವಾಮಿ ಅಯ್ಯಂಗಾರ್. ಯಶವಂತ ಚಿತ್ತಾಲ, ಶಂಕರ ಮೊಕಾಶಿ ಪುಣೇಕರ, ತ್ರಿವೇಣಿ, ಶಾಂತಿನಾಥ ದೇಸಾಯಿ. ಯು.ಆರ್.ಅನಂತಮೂರ್ತಿ, ರಾಘವೇಂದ್ರ ಖಾಸನೀಸ, ಪಿ.ಲಂಕೇಶ್, ಶ್ರೀನಿವಾಸ ವೈದ್ಯ, ನಾ.ಡಿಸೋಜ, ಬೆಸಗರಹಳ್ಳಿ ರಾಮಣ್ಣ, ಪೂರ್ಣಚಂದ್ರ ತೇಜಸ್ವಿ, ಜಿ.ಎಸ್.ಸದಾಶಿವ, ರಾಜಶೇಖರ ನೀರಮಾನ್ವಿ, ವೀಣಾ ಶಾಂತೇಶ್ವರ, ವೈದೇಹಿ, ಬರಗೂರು ರಾಮಚಂದ್ರಪ್ಪ, ಶ್ರೀ ಕೃಷ್ಣ ಆಲನಹಳ್ಳಿ, ಎಸ್.ದಿವಾಕರ್, ದೇವನೂರ ಮಹಾದೇವ, ಗೀತಾ ನಾಗಭೂಷಣ, ಫಕೀರ್ ಮಹಮ್ಮದ್ ಕಟ್ಪಾಡಿ, ಮಿತ್ರಾ ವೆಂಕಟ್ರಾಜ್, ಬೋಳುವಾರು ಮಹಮದ್ ಕುಂಞಿ, ಕುಂ. ವೀರಭದ್ರಪ್ಪ, ಕೆ.ಸತ್ಯನಾರಾಯಣ, ಜಯಂತ ಕಾಯ್ಕಿಣಿ, ನೇಮಿಚಂದ್ರ, ಅಮರೇಶ ನುಗಡೋಣಿ, ಪ್ರಹ್ಲಾದ ಅಗಸನಕಟ್ಟೆ, ಲೋಕೇಶ ಅಗಸನಕಟ್ಟೇ, ಸುನಂದ ಕಡಮೆ, ವಿವೇಕ ಶಾನಭಾಗ್, ವಸುದೇಂದ್ರ, ಮೊಗೆಳ್ಳಿ ಗಣೇಶ್, ಇತ್ಯಾದಿ ಸೃಜನಶೀಲ ಬರಹಗಾರರು ಕನ್ನಡ ಸಣ್ಣಕಥಾ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ.

ಕಾಲ, ಸ್ಥಳದ ಬಂಧವಿಲ್ಲದ, ಯಾವುದೇ ಭಾಷೆ ಪ್ರದೇಶ ವ್ಯಕ್ತಿಗೂ ಹೊಂದಿಕೊಳ್ಳಬಹುದಾದ ಸಣ್ಣಕಥೆಗಳು ತಮ್ಮ ಆಕರ್ಷಣೆಯನ್ನು ಎಂದೂ ಕಳೆದುಕೊಂಡಿಲ್ಲ. ಕಥೆಗಳು ಚಿಕ್ಕದಿರಲಿ ದೊಡ್ಡದಿರಲಿ, ಅವು ನೀಡುವ ಅನುಭವ ಅತ್ಯಂತ ವಿಶಿಷ್ಟವಾದುದು.

'ಕಥೆಗಾರ/ಗಾರ್ತಿ ಏನು ಹೇಳಲು ಬಯಸಿದ್ದಾನೆ/ತ್ತಿದ್ದಾಳೆ, ಹೇಗೆ ಅರ್ಥ ಮಾಡಿಕೊಳ್ಳಬಹುದು ಎಂದುಕೊಳ್ಳುವ ಕಲ್ಪನಾ ಲೋಕವೇ ಒಂದು ಅದ್ಭುತ ಮಾಯಾ ಸೃಷ್ಟಿ. ಮನದಾಳದಲ್ಲಿ ಎಂದೋ ಓದಿದ ಕಥೆಗಳ ಮುಖವಿಲ್ಲದ ತುಣುಕುಗಳು ಜೀವಂತವಾಗಿ ಉಳಿಯಲು ಕಾರಣವೇನಿರಬಹುದು? ಕಥೆಯಲ್ಲಿ ನೋವನ್ನುಂಡವರೊಡನೆ ಕಣ್ಣೀರು ಹರಿಸುವ ಅನುಭವ ಯಾಕಾಗುತ್ತದೆ? ಸುಖಾಂತ, ದುಃಖಾಂತಗಳು ಏಕಪ್ರಕಾರವಾಗಿ ಕಾಡುವುದು ಏಕೆ? ಕಥೆಯ ವೈಶಿಷ್ಟ್ಯ ಇರುವುದೇ ಅಲ್ಲಿ. ಉತ್ತರ ಕಾಣದ ಪ್ರಶ್ನೆಗಳ ಸರಮಾಲೆಯನ್ನು ಪೋಣಿಸುವುದರಲ್ಲಿ' ಡಾ. ಗೀತಾ ಶೆಣೈ – ಬೆನ್ನುಡಿ – ಕಥೆಯೆಂಬ ಮಾಯಾಸೃಷ್ಟಿ.

ಕೃತಿ – ಕಥೆಯಾದಳು ಹುಡುಗಿ (ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ).

## ಅಧ್ಯಾಯ–3 : ವಿವೇಕ ಶಾನಭಾಗರ ಬದುಕು ಮತ್ತು ಬರಹ

"ವಯಸ್ಸಿಗೆ ಮೀರಿದ ಪ್ರಬುದ್ಧತೆ, ಕೌತುಕಾಸ್ಪದವಾದಷ್ಟೇ ಮುಂದೆ ಬರಲಿರುವ ಇವರ ಕಥೆಗಳ ಬಗೆಗೆ ಬಹುದೊಡ್ಡ ಭರವಸೆ ಹುಟ್ಟಿಸುವಂತಹುದೂ ಆಗಿವೆ" –

ಯಶವಂತ ಚಿತ್ತಾಲ – ಮುನ್ನುಡಿ –'ಅಂಕುರ' ಕಥಾ ಸಂಕಲನ

ಹಿರಿಯ ಕಥೆಗಾರರಾದ ಶ್ರೀ ಯಶವಂತ ಚಿತ್ತಾಲರ 'ಬಹುದೊಡ್ಡ ಭರವಸೆ" ಸಫಲವಾಗಿ ಇದು ಕನ್ನಡ ಸಣ್ಣ ಕಥಾಲೋಕದ ಸಂದರ್ಭದಲ್ಲಿ ವಿವೇಕ ಶಾನಭಾಗರು ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿದ್ದಾರೆಂದರೆ, ತಪ್ಪಾಗಲಾರದು.

ತಮ್ಮ ಹದಿನೇಳನೆಯ ವಯಸ್ಸಿನಲ್ಲಿಯೇ ಬರವಣಿಗೆಯನ್ನು ಆರಂಭಿಸಿದ ವಿವೇಕ ಶಾನಭಾಗರು ಮೂಲತಃ ಉತ್ತರ ಕನ್ನಡ ಜಿಲ್ಲೆಯವರು (ಜನನ 29.03.1962). ಇಂಜಿನಿಯರಿಂಗ್ ಪದವೀಧರರಾದ ಇವರು ಉದ್ಯೋಗ ನಿಮಿತ್ತ ಕಲ್ಕತ್ತಾ, ಅಮೇರಿಕಾ, ಇಂಗ್ಲೆಂಡ್‌ಗಳಲ್ಲಿ ಹಲವು ವರ್ಷ ವಾಸವಾಗಿದ್ದರು. ಸದ್ಯ ಬೆಂಗಳೂರಿನಲ್ಲಿ ನೆಲೆಸಿದ್ದಾರೆ.

ಇವರ ಒಟ್ಟು ಹತ್ತು ಪುಸ್ತಕಗಳು ಪ್ರಕಟವಾಗಿವೆ. ಅವುಗಳಲ್ಲಿ 5 ಕಥಾಸಂಕಲನಗಳು, 3 ಕಾದಂಬರಿಗಳು ಮತ್ತು 2 ನಾಟಕಗಳು ಸೇರಿವೆ. ಇದಲ್ಲದೇ ಇವರು ಎರಡು ಕೃತಿಗಳನ್ನು ಸಂಪಾದಿಸಿದ್ದಾರೆ.

ಇವರ ಹಲವು ಕಥೆಗಳು ಇಂಗ್ಲೀಷ್ ಹಾಗೂ ಹಲವು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. ಇವರ ಕಥಾ ಸಂಕಲನವೊಂದು ತಮಿಳಿನಲ್ಲಿ ಪ್ರಕಟವಾಗಿದೆ. ಇವರ 'ಘಾಚರ್ ಘೋಚರ್' ಎಂಬ ಕೃತಿಯು ಇಂಗ್ಲಿಷ್ ಅನುವಾದದಲ್ಲಿ 2015 ಡಿಸೆಂಬರ್‌ನಲ್ಲಿ ಹಾರ್ಪರ್ ಕಾಲಿನ್ಸ್ ಪ್ರಕಾಶನದಿಂದ ಪ್ರಕಟಗೊಳ್ಳಲಿದೆ.

ಇವರು 'ದೇಶ ಕಾಲ' ಎಂಬ ವಿಶಿಷ್ಟ ಸಾಹಿತ್ಯಿಕ ತ್ರೈಮಾಸಿಕವನ್ನು 7 ವರ್ಷಗಳ ಕಾಲ ಸಂಪಾದಿಸಿದ್ದರು. ಪ್ರತಿತಿಂಗಳು ಮೊದಲ ಭಾನುವಾರ ಪ್ರಕಟವಾಗುತ್ತಿದ್ದ 'ಪ್ರಜಾವಾಣಿ – ದೇಶ ಕಾಲ ಸಾಹಿತ್ಯ ಪುರವಣಿ'ಗೆ ಅದರ ಆರಂಭದ ಒಂದು ವರ್ಷ ಕಾಲ (2010) ಸಂಪಾದಕರಾಗಿದ್ದರು.

ವಿವೇಕ ಶಾನಭಾಗರು ಕೆಲವು ಕಾಲ "ಭಾವನಾ" ಮಾಸಪತ್ರಿಕೆಯಲ್ಲಿ 'ಕಥನ ಕುತೂಹಲ' ಎಂಬ ಹೆಸರಿನ ಅಂಕಣವನ್ನೂ, 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿಯಲ್ಲಿ 'ಲಂಗರು' ಎಂಬ ಹೆಸರಿನ ಅಂಕಣವನ್ನೂ ಬರೆಯುತ್ತಿದ್ದರು.

**ಪ್ರಕಟಿತ ಪುಸ್ತಕಗಳು:**

**ಕಥಾಸಂಕಲನಗಳು:**

1. ಅಂಕುರ
2. ಲಂಗರು
3. ಹುಲಿ ಸವಾರಿ
4. ಮತ್ತೊಬ್ಬನ ಸಂಸಾರ
5. ಫಾಚರ್ ಫೋಚರ್

**ಕಾದಂಬರಿಗಳು:**

1. ಇನ್ನೂ ಒಂದು
2. ಒಂದು ಬದಿ ಕಡಲು
3. ಊರು ಭಂಗ

**ನಾಟಕಗಳು:**

1. ಸಕ್ಕರೆ ಗೊಂಬೆ

   ಈ ನಾಟಕವು ನೀನಾಸಂ ತಿರುಗಾಟದ ಮೂಲಕ ಕರ್ನಾಟಕದಾದ್ಯಂತ ಐವತ್ತಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ.

2. ಬಹುಮುಖಿ

   ಈ ನಾಟಕವು 'ರಂಗಶಂಕರ'ದ 2007 ರ ಸಾಲಿನ ರಾಷ್ಟ್ರೀಯ ನಾಟಕೋತ್ಸವದಲ್ಲಿ ಮೊದಲು ಪ್ರದರ್ಶಿತಗೊಂಡು ಬೆಂಗಳೂರಿನಲ್ಲಿ 25ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ.

**ಸಂಪಾದಿತ ಕೃತಿಗಳು:**

1. ಶ್ರೀಕೃಷ್ಣ ಆಲನಹಳ್ಳಿ ವಾಚಿಕೆ

ನಿಜ ಜೀವನದ ಘಟನೆಗಳು ಕಥೆಯಾಗುವ, ವ್ಯಕ್ತಿಗಳು ಪಾತ್ರಗಳಾಗುವ ಪ್ರಕ್ರಿಯೆ ತೀರಾ ಸಂಕೀರ್ಣವಾದದ್ದು. ಈ ಸಂಕೀರ್ಣ ಪ್ರಕ್ರಿಯೆಗೆ 'ತನ್ನ ಮಾರ್ದವತೆಯ ಸ್ಪರ್ಶ ಕೊಡುವ, ಯಾರನ್ನೂ, ಯಾವುದನ್ನೂ ಬಿಡಿಯಾಗಿ ಎಳೆದು ಹರಿದು ನೋಯಿಸದೆ, ಬದುಕಿನ ನೇಯ್ಗೆಯನ್ನೆ ಇಡಿಯಾಗಿ ಅಕ್ಕರೆ, ಆದರದಿಂದ ನೋಡುವ' (ಜಯಂತ್ ಕಾಯ್ಕಿಣಿ) ಮನೋಧರ್ಮವೇ ಆಧುನಿಕ ಕನ್ನಡ ಸಣ್ಣ ಕಥಾಲೋಕಕ್ಕೆ ವಿವೇಕ ಶಾನಭಾಗರ ಕಾಣ್ಕೆಯಾಗಿದೆ.

ಸದ್ದುಗದ್ದಲವಿಲ್ಲದ ನಿರುದ್ವಿಗ್ನ ಭಾಷಾಸ್ತರ ಮತ್ತು ವ್ಯಂಗ್ಯ ವೈನೋದಿಕ ಶೈಲಿ - ಇವು ವಿವೇಕರ ಕಥೆಗಳ ವಿಶಿಷ್ಟ ಲಕ್ಷಣಗಳು.ಕೆಲವು ಉದಾಹರಣೆಗಳನ್ನು ಗಮನಿಸುವದಾದರೆ-

'ಮನೆಯವರ ಕನಸುಗಳನ್ನು ಕೆಡವಬೇಕಾಯಿತು' (ಕಥೆ- ಕೆಲವು ತತ್ವಗಳ ಸಲುವಾಗಿ).

'ವೇದನೆಯ ವೇಷದಲ್ಲಿ ಬಿಡುಗಡೆಯ ನಿರಾಳತೆಯೂ ಇದೆ' (ಕಥೆ- ನಿಲುಕು- ಕಥಾಸಂಕಲನ-ಲಂಗರು- ಪುಟ ಸಂಖ್ಯೆ-112).

'ಇಳಿದರೆ ಹುಲಿ ತಿನ್ನುತ್ತದೆ, ಸವಾರಿ ಮಾಡುತ್ತಲೇ ಇದ್ದರೆ ಹಸಿವಿನಿಂದ ಸಾವು' ಕಥೆ- ಹುಲಿ ಸವಾರಿ. ( ಕಥ ಸಂಕಲನ- ಹುಲಿ ಸವಾರಿ).

'ಕಂಡದ್ದಕ್ಕೂ ಕಲ್ಪಿಸಿಕೊಂಡದ್ದಕ್ಕೂ ವ್ಯತ್ಯಾಸ ಮಾಡದೇ ತೋಚಿದಂತೆ ಉತ್ತರಿಸತೊಡಗಿದೆ' (ಕಥೆ- ಕಾರಣ- ಪುಟಸಂಖ್ಯೆ-45).

'ಅವಳ ಸ್ವಭಾವ ಪರಿಮಳದ ಕಡ್ಡಿ ಅನ್ನುತ್ತಾರಲ್ಲ ಅಂಥದ್ದು' ಪುಟ-9 (ಕಥೆ- ಪರಸ್ಪರ)

'ಒಂದು ಸಹಜ ಮಾತಿನಿಂದ ಇಡೀ ಸನ್ನಿವೇಶವೇ ಬದಲಾಗಿಹೋಯಿತು' (ಕಥೆ- ಮತ್ತೊಬ್ಬನ ಸಂಸಾರ-ಪುಟ ಸಂಖ್ಯೆ-16).

'ನಿಜವನ್ನೇ ಬರೆದರೂ ನಿಜ ಆಗುವುದಿಲ್ಲ'-(ಕಥೆ – ಕೋಳಿ ಕೇಳಿ ಮಸಾಲೆ- ಕಥಾ ಸಂಕಲನ- ಫಾಚರ್ ಫೋಚರ್)

'ಒಬ್ಬರ ಕನಸಿನಲ್ಲಿ ಒಬ್ಬರು ಸಿಕ್ಕಿಬಿದ್ದ ಹಾಗೆನಿಸಿತು'-ಪುಟ ಸಂಖ್ಯೆ- 76-ಕಥೆ-ಅಂತಃಪಟ (ಕಥಾ ಸಂಕಲನ- ಲಂಗರು)

'ಅಲೆಯುತ್ತ ತಪಸ್ವಿಯ ಹಾಗೆ ತನ್ನನ್ನೇ ಕೊಟ್ಟುಕೊಳ್ಳುತ್ತ ಕಲಿತ'. ಕಥೆ- ಮೋಹನ ಮುರಲಿ-(ಕಥಾ ಸಂಕಲನ -ಲಂಗರು).

‘ಅನಿವಾರ್ಯತೆಯನ್ನು ಬಯಕೆಯಂತೆ ತೋರಿಸಿಕೊಳ್ಳುವುದು ಕುಟುಂಬದ ಶಕ್ತಿಗಳಲ್ಲೊಂದು’– ಕಥೆ – ಫಾಚರ್ ಫೋಚರ್.

‘ವ್ಯಕ್ತಿತ್ವದಲ್ಲಿ ಒಂದು ಫಾಜೀಲ ಎಳೆ ಇಲ್ಲದಿದ್ದರೆ ಜೀವನದ ಸತ್ಯಗಳು ಕಾಣಿಸುವದಿಲ್ಲ’– ಕಥೆ– ಅಂಚು–(ಕಥಾ ಸಂಕಲನ– ಮತ್ತೊಬ್ಬನ ಸಂಸಾರ).

‘ಇಡೀ ಊರಿಗೆ ಊರೇ ಮಾರಾಟಕ್ಕೆ ಇಟ್ಟಂತೆ’ – ಕಥೆ– ಕಂತು (ಕಥಾ ಸಂಕಲನ– ಹುಲಿ ಸವಾರಿ).

‘ನೆರಳಿನ ಹಾಗೆ ಸದ್ದು ಮಾಡದೇ ಚಲಿಸುವ ಈ ಕಳ್ಳನ ಕಥೆಯನ್ನು ಅವಳಿಂದ ಕೇಳುವುದೆಂದರೆ ಎಲ್ಲರಿಗೂ ಇಷ್ಟ’ –ಪುಟ ಸಂಖ್ಯೆ–93 ಕಥೆ– ಕಾಂತಾ ಸಮ್ಮಿತ. ( ಕಥಾ ಸಂಕಲನ– ಮತ್ತೊಬ್ಬನ ಸಂಸಾರ).

‘ಅರಳುವ ಚಿಗುರಿಗೆ ಇದೆಲ್ಲ ಅಪರಿಚಿತ’ – ಪುಟ ಸಂಖ್ಯೆ–83. ಕಥೆ– ಚಿಪ್ಪುಗಳು– ಕಥಾ ಸಂಕಲನ– ಅಂಕುರ.

ತನ್ನ ಸುತ್ತಮುತ್ತಲ ಪರಿಸರದಲ್ಲಿ ನಡೆಯುತ್ತಿರುವ ಒಂದೇ ಸನ್ನಿವೇಶವನ್ನು ಭಿನ್ನ ಭಿನ್ನ ಪರಿಪ್ರೇಕ್ಷಗಳಿಂದ ನೋಡುತ್ತಾ, ಒಂದು ಸಮಾಜದ ಹೊರಳುವಿಕೆಯಲ್ಲಿರುವ ನೋವು, ಕ್ರೌರ್ಯ, ಉತ್ಸಾಹ, ನಿರೀಕ್ಷೆ ಇತ್ಯಾದಿಗಳಿಂದ ಕೂಡಿದ ಸಂಕೀರ್ಣ ಅನುಭವವನ್ನು ನೀಡುತ್ತಲೇ . . . ಓದುಗರ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳನ್ನು ಇವರ ಕಥೆಗಳು ಸೃಷ್ಟಿಸುತ್ತವೆ.

ಇವರ ಅನೇಕ ಕಥೆಗಳು ಪಾತ್ರಗಳ ಅಂತರಂಗದ ತುಡಿತವನ್ನು ಹೊರಹಾಕದೆ ತೊಳಲಾಡುವುದನ್ನು ಓದುಗರು ಗ್ರಹಿಸಬಹುದು. ಇದು ಎಲ್ಲರ ಬದುಕಿನಲ್ಲಿಯೂ ಅನುಭವಕ್ಕೆ ಬರುವಂತಹುದು. ಇಬ್ಬರು ವ್ಯಕ್ತಿಗಳು ಪರಸ್ಪರ ಮಾನಸಿಕ ತೊಳಲಾಟದಲ್ಲಿದ್ದಾಗ, ಯಾರಾದರೊಬ್ಬರು ಹೆಚ್ಚಿನ ನೋವನ್ನು ಅನುಭವಿಸ ಬೇಕಾಗುತ್ತದೆಯೆಂಬ ಕಟು ಸತ್ಯವನ್ನು ಅವರ ಅನೇಕ ಕಥೆಗಳು ಹೊರಹಾಕುತ್ತವೆ.

ನಮ್ಮ ಸಾಮಾಜಿಕ ವ್ಯವಸ್ಥೆ, ಸಕಾರಾತ್ಮಕವಾಗಿ ಬದಲಾಗಬೇಕು. ಅದು ಸರ್ವರಿಗೂ ಒಳಿತನ್ನು ಬಯಸಬೇಕು ಎನ್ನುವಂತಹ ವಿವೇಕ ಶಾನಭಾಗರ ಆಶಯ ಆರೋಗ್ಯಪೂರ್ಣವಾದುದು.

ಅನೇಕ ಧ್ವನಿಪೂರ್ಣ ಶೀರ್ಷಿಕೆಗಳ ಮೂಲಕ (ಕಂತು, ಹುಲಿಸವಾರಿ, ನಿರ್ವಾಣ, ಫಾಚರ್ ಫೋಚರ್, ಇತ್ಯಾದಿ) ಕಥನ ಶೈಲಿಯಲ್ಲಿ ವಿವೇಕ ನಡೆಸಿರುವ ಹೊಸ ಹೊಸ ಪ್ರಯೋಗಗಳು ಅಭ್ಯಾಸಯೋಗ್ಯವಾಗಿವೆ. 'ಈ ವೈವಿಧ್ಯಪೂರ್ಣ ಕಥೆಗಳು ಸಹ ಜೀವಿಯ ಅಂತರಂಗವನ್ನು ಬೆಚ್ಚಗಾಗಿಸುತ್ತಲೇ ಸಂವೇದನೆಯನ್ನು ಹಿಗ್ಗಿಸುವ ಶಕ್ತಿ, ನಮ್ರತೆ ಮತ್ತು ತನ್ಮಯತೆಯನ್ನು ಪಡೆದಿವೆ' – ಜಯಂತ್ ಕಾಯ್ಕಿಣಿ.

ಕೌಟುಂಬಿಕ, ಸಾಮಾಜಿಕ, ಔದ್ಯೋಗಿಕ, ಇತ್ಯಾದಿ ಹಿನ್ನೆಲೆಯಲ್ಲಿ ರಚಿತವಾಗಿರುವ ಅನೇಕ ಕಥೆಗಳು ನಮ್ಮ ದಿನನಿತ್ಯದ ಹಪಹಪಿಗಳಂತೆಯೇ ಇವೆ. ಅವರ ಅನೇಕ ಕಥೆಗಳಲ್ಲಿರುವ ವ್ಯಕ್ತಿಗಳು ಸಮಾಜದ ಒಂದು ಅಂಗವಾಗಿ ಕಾಣಿಸಿಕೊಳ್ಳುತ್ತಾರೆ.

ವಿವೇಕ ಶಾನಭಾಗರು ತಾವು ಜೀವನದಲ್ಲಿ ಕಂಡು ಅನುಭವಿಸಿದ ಭಾವನೆಗಳ ವಿಶ್ಲೇಷಣೆಗೆ ತೊಡಗುವುದಿಲ್ಲ. ಪಾತ್ರದ ಕ್ರಿಯೆಯ ಕಡೆಗೆ ಹೆಚ್ಚು ಗಮನ ಕೊಡುತ್ತಾರೆ. ತಮ್ಮ ಪ್ರತಿ ಕಥೆಯನ್ನೂ 'ಕಲೆಯಾಗಿ ಪರಿವರ್ತಿಸುವ ಹುಚ್ಚಾಟ'ಕ್ಕೆ ಅವರೆಂದೂ ಪ್ರಯತ್ನಿಸಿಲ್ಲ. ಮನುಷ್ಯ ಪ್ರಜ್ಞೆ–ಸ್ವಭಾವ ಸಂಬಂಧಗಳಲ್ಲಿ ಅಂತರ್ಗತವಾಗಿರುವ ಇಕ್ಕಟ್ಟುಗಳ ಬಗ್ಗೆ ಅವರ ಕಥೆಗಳು ನಮ್ಮ ಅರಿವನ್ನು ಹಿಗ್ಗಿಸುವಂತಿವೆ.

ಸಹಜ ಸಂಗತಿಗಳನ್ನು ಮುಖಾಮುಖಿಯಾಗಿಸುತ್ತಲೇ, ಎಲ್ಲೋ ಒಂದು ಕಡೆ 'ತಾಳಿಕೆಯ ಪರಾಕಾಷ್ಠೆ'ಯನ್ನು ಅವರ ಪಾತ್ರಗಳು ಮುಟ್ಟಿ ಬಿಡುತ್ತವೆ.

ವಿವೇಕ ಶಾನಭಾಗರ ಕಥೆಗಳನ್ನು ಓದಿ ನನಗೆ ಬಹಳ ಸಂತೋಷವಾಯಿತೆಂದು ಎಂದೂ ಹೇಳುವಂತಿಲ್ಲ. ಮನುಷ್ಯನ 'ಅಸಹಾಯಕತೆ ಮತು ನಯವಂಚಕತನ' ಹೇಗೆ ಈ ಜಗತ್ತನ್ನು ಆಳುತ್ತಿದೆಯೆಂಬ ನೋವಿನ 'ಹುಳ'ವನ್ನು ಓದುಗರ ತಲೆಯಲ್ಲಿ ಅವರ ಕಥೆಗಳು ತೇಲಿಬಿಡುತ್ತವೆ.

'ಕಾಲ ಸಂಶ್ಲೇಷಣೆ ಮತ್ತು ಸ್ಮೃತಿ ಸಂಶ್ಲೇಷಣೆಗಳನ್ನು ಸೂಚಿಸುವುದು ಈ ಕಥೆಗಳ ಆಶಯವಿದ್ದೀತೇ?' – ಕೆ.ವಿ.ಅಕ್ಷರ

ಎಲ್ಲಾ ನಕಾರಾತ್ಮ, ದುಷ್ಕೃತ್ಯಗಳನ್ನು ಎಲ್ಲಾ ಕಾಲಕ್ಕೂ ಮೀರಲು ಅಸಾಧ್ಯವೆಂಬ ಕಹಿಸತ್ಯವನ್ನು ಕಥೆಯೊಳಗೆ ಪ್ರತಿಬಿಂಬಿಸುತ್ತಲೇ, ಅದರ ನಡುವೆಯೂ ಬದುಕುವ ಒಂದು ವಿಧಾನವಿದೆಯೆಂಬುದನ್ನು – ಅವರ ಕಥೆಗಳು ಪರೋಕ್ಷವಾಗಿ ಓದುಗರ ಗಮನಕ್ಕೆ ತರುತ್ತವೆ.

ಮನುಷ್ಯನ ವ್ಯಕ್ತಿತ್ವದಲ್ಲಿನ ಕುಂದು-ಕೊರತೆಗಳನ್ನೂ ಮೀರಿ ಅವನನ್ನು ಅರ್ಥಮಾಡಿಕೊಳ್ಳುವ ಅಂತಃಕರಣ, ಜಾಗತೀಕರಣ ಸೃಷ್ಟಿಸಿರುವ ಆತಂಕಗಳು, ಗಾಢದೇಶಿ ಪ್ರಜ್ಞೆ, ಸ್ತ್ರೀಪರ ನಿಲುವು ಮತ್ತು ಚರಿತ್ರಕಾರನಿಗಿರಬೇಕಾದ ವೈಚಾರಿಕ ವಸ್ತುನಿಷ್ಠತೆ, ಇತ್ಯಾದಿ ಅಂಶಗಳನ್ನು ಬೆಸೆಯುತ್ತಲೇ ಅವರ ಕಥೆಗಳು . . . ಸಾಧಾರಣ ಕಥೆಗಳ ಮಿತಿಯನ್ನು ಮೀರಿ ಭಿನ್ನ ಅನಿಸಿಕೊಳ್ಳುತ್ತವೆ.

## ಅಧ್ಯಾಯ–4 : ವಿವೇಕ ಶಾನಭಾಗರ ಕಥೆಗಳಲ್ಲಿ ಅಂತರಂಗದ ತುಡಿತ

ಕಥಾಸಂಕಲನ – 'ಅಂಕುರ'

ಕಥೆಯ ಹೆಸರು – 'ಚಿಪ್ಪುಗಳು' – ಬರೆದದ್ದು ಹದಿನೇಳನೆಯ ವಯಸ್ಸಿನಲ್ಲಿ.

ಪುಟ ಸಂಖ್ಯೆ 94, ಎರಡನೆಯ ಪ್ಯಾರಾ – "ಹನಿಯುವ ಮಳೆಯಲ್ಲಿಯೇ ಯಾವನೋ ಒಬ್ಬ ಹುಡುಗ ರಸ್ತೆಯ ಪಕ್ಕದಲ್ಲಿ ಕುಳಿತುಕೊಂಡಿದ್ದ. ಹನ್ನೆರೆಡು ವರ್ಷವಿರಬಹುದು. ನನ್ನನ್ನು ಕಂಡೊಡನೆಯೇ ಛತ್ರಿ ಎತ್ತಿ ಒಳಗೆ ಓಡಿದ. ನಗ್ನ ಪುಷ್ಠವನ್ನು ದೃಷ್ಟಿಸಿದಾಗ . . . ಇಲ್ಲಿ ಅರಳಬೇಕಾದ ನೂರಾರು ಜೀವಗಳು ಸಂಕೀರ್ಣವಾಗಲು ಸಾಧ್ಯವಾಗದೇ ಸಾಯುತ್ತವೆ ಎಂದೆನಿಸಿತು. ನಾನು ಹೇಗೋ ಬದುಕಿದೆನಲ್ಲ ಎಂಬ ನಿಟ್ಟುಸಿರು!

'ನಾನು ಪಡೆಯಬಹುದಾದ ಅನುಭವದ ಸಾಧ್ಯತೆಗಳೆಲ್ಲಾ ಇಲ್ಲಿ ಮುದುಡಿ ಕೊಳ್ಳುತ್ತವೆ ಎಂಬ ವಿಚಾರ ಅವಿರ್ಭವಿಸಿತು'.

'ಎಚ್ಚರಿಕೆಯಿಂದ ಕಲ್ಲುಗಳ ಮೇಲೆಯೇ ಕುಪ್ಪಳಿಸುತ್ತ, ನೆಗೆಯುತ್ತ ನಡೆದೆ. ಯಾವುದೇ ಬಸ್ಸು ವೇಗವಾಗಿ ಬರುತ್ತಿತ್ತು. ಯಾವ ಕಡೆಗೆ ಹೋಗುವ ಬಸ್ಸೋ ಏನೋ?"

ಪುಟ–89

'ಇವರೆದುರಲ್ಲಿ ಗಟ್ಟಿಯಾಗಬೇಕಾದರೆ ಕ್ರಿಯೆಗಳಿಂದ ಸಾಧ್ಯವೇ ಇಲ್ಲ. ನನ್ನೊಳಗೆಯೇ ಮಾನಸಿಕವಾಗಿ ಹೆಪ್ಪುಗಟ್ಟಬೇಕು.

'ನಾನು ಹೊರಬರಬೇಕು–ಚಿಪ್ಪು ಸೀಳಿ ಹೊರಬರಬೇಕು. ಮಾನಸಿಕವಾಗಿ ಬಂಧಿಯಾಗಿದ್ದೇನೆ. ರೂಢಿಸಿಕೊಂಡ ಹಳ್ಳಿಯ ಹಳೆಯ ಮೌಲ್ಯಗಳಿಂದ ಭಿನ್ನವಾಗಿ, ಹೊಸದಾಗಿ ಮೂಡಿ ಬರಬೇಕು. ನವೀನ ವೈಚಾರಿಕ ಬದುಕು ಕಟ್ಟಬೇಕು.'

. . . . ವಿವೇಕ ಶಾನಭಾಗರ ಈ ರೀತಿಯ ನಿಲುವುಗಳು ಅವರ ಬರವಣಿಗೆಯನ್ನು ನಿರ್ದೇಶಿಸಿದೆಯೆಂದು ಹೇಳಬಹುದು.

ಪುಟ–85 . . . . . .

'ತೀರ ಸಪೂರವಾಗುತ್ತಿದ್ದೇನೆಯೇ? ಅಥವಾ ಗಟ್ಟಿಯಾಗಬೇಕು. ಈ ರೀತಿ ಗಟ್ಟಿಯಾಗಿ, ಗಟ್ಟಿ ಕ್ರಿಯೆಗಳ ಮೂಲಕ ಪೂರ್ಣತೆಯ ದನಿಯನ್ನು ಮುಟ್ಟಬೇಕು.

'ಈಗಿನ ಈ ಹಳ್ಳಿಗರನ್ನು ಅರ್ಥೈಸುವ ಕ್ರಿಯೆ ನನ್ನಿಂದ ಅಸಾಧ್ಯವಾಗಿದೆ'.

. . . . ವಿವೇಕ ಶಾನಭಾಗರ ಈ ಮಾತುಗಳು ಹೊಸತೇನನ್ನೋ ಹುಡುಕುವ ಅಥವಾ ಹುಟ್ಟುಹಾಕುವ ಪ್ರಕ್ರಿಯೆಯತ್ತ ಅವರ ಅಂತರಂಗದ ತುಡಿತ ಹೊಸತನಕ್ಕಾಗಿ ಕಾಯುತ್ತಿದೆ. . . ತಮ್ಮ ಸೃಜನಶೀಲ ಅಭಿವ್ಯಕ್ತಿಯ ಮೊದಲ ಮೆಟ್ಟಿಲಾಗಿ ತಮ್ಮ ಮೊದಲ ಕಥಾಸಂಕಲನಕ್ಕೆ 'ಅಂಕುರ'ವೆಂದು ಹೆಸರಿಟ್ಟಿರುವುದು ಧ್ವನಿಪೂರ್ಣವಾಗಿದೆ.

ಈ ಕಥಾಸಂಕಲನದಲ್ಲಿ ಮನುಷ್ಯನನ್ನು ಭಿನ್ನ ಅವಸ್ಥೆಗಳಲ್ಲಿ, ಭಿನ್ನ ರೂಪಗಳಲ್ಲಿ ಕಾಡುವ 'ಕಾಮ' ಮುಖ್ಯ ಪಾತ್ರವಹಿಸುತ್ತದೆ. 70–80ರ ದಶಕಗಳಲ್ಲಿ ಬರೆಯಲ್ಪಟ್ಟ ಈ ವರ್ಗದ ಕಥೆಗಳು ನವ್ಯ ಕಥೆಗಳ ಮಾದರಿಯನ್ನು ಅನುಸರಿಸುತ್ತವೆ. ಕಿಶೋರಾವಸ್ಥೆಯಲ್ಲಿ ಕಾಡುವ ಕಾಮ (ಕಥೆ–ಪರಸ್ಪರ), ತನ್ನ ಪುರುಷತ್ವವನ್ನು ಸಿದ್ಧಪಡಿಸಲೇಬೇಕಾದ ಒತ್ತಡ (ಕಥೆ–ಅಂಕುರ), ಲೈಂಗಿಕತೆಯನ್ನು ಕುರಿತಾದ ಕಿಶೋರಾವಸ್ಥೆಯ ಭಾವೋದ್ವೇಗಗಳು (ಮಾಧುರಿ) ಇತ್ಯಾದಿ.

ಈ ಸಂಕಲನದಲ್ಲಿನ ವಿಶೇಷವಾದ ಕಥೆಗಳೆಂದರೆ – 'ಪರಸ್ಪರ' ಮತ್ತು 'ಬಂದಾವೋ ಬಾರವೋ". ಹಿಂಜರಿಕೆ ಹಾಗೂ ಸಂಕೋಚ ಸ್ವಭಾವದ ನಿರೂಪಕನಿಗೆ ವಿರುದ್ಧವಾಗಿ ಬಿಚ್ಚು ಮನಸ್ಸಿನ ಹಾಗೂ ಸ್ವೇಚ್ಛಾಚಾರಿಯಾದ ಅವನ ಸ್ನೇಹಿತ ನಾಯಕನ ಪಾತ್ರ ಬರುತ್ತದೆ. ಕೊನೆಗೆ ತನ್ನ ಮುಚ್ಚಿಟ್ಟ ಕಾಮನೆಗಳ ಮೂರ್ತರೂಪವೇ ನಾಯಕ ಎಂದು ನಿರೂಪಕನಿಗೆ ಅರಿವಾಗುವಲ್ಲಿ ಕಥೆ ಮುಗಿಯುತ್ತದೆ. ವಯಸ್ಸಿನಲ್ಲಿ ತನಗಿಂತ ದೊಡ್ಡವಳಾದ ಪ್ರೇಮಕ್ಕನ ಬಗ್ಗೆ ನಿರೂಪಕನಿಗಿರುವ ಅಸ್ಪಷ್ಟ ಕಾಮನೆಗಳನ್ನು ನವಿರಾಗಿ 'ಪರಸ್ಪರ' ಕಥೆ ಚಿತ್ರಿಸುತ್ತದೆ.

ವಿವೇಕ ಶಾನಭಾಗರ ಕಥೆಗಳ ಬೆಳವಣಿಗೆಯಲ್ಲಿ 1992 ರಲ್ಲಿ ಪ್ರಕಟವಾದ 'ಲಂಗರು' ಕಥಾಸಂಕಲನ ವಿಶೇಷವಾದ ಕಥಾಸಂಕಲನ. ಇದರಲ್ಲಿ ಒಟ್ಟು ಹತ್ತು ಕಥೆಗಳಿವೆ. ವ್ಯಕ್ತಿಯೊಬ್ಬನು ಬೆಳೆಯುತ್ತಾ ಹೋದಂತೆ . . . ಅವನು ತನ್ನ ಸುತ್ತ ಕಟ್ಟಿಕೊಳ್ಳುವ ಗೊಂದಲಮಯ ಸಂಬಂಧಗಳನ್ನು ಇದು ವಿಶ್ಲೇಷಿಸುತ್ತವೆ. ಕುಟುಂಬ, ಗೆಳೆಯರು, ಬಂಧುಗಳು, ಪರಿಚಿತರು–ಅಪರಿಚಿತರು, ಮುಂತಾದವರೊಂದಿಗೆ ವ್ಯಕ್ತಿಯೊಬ್ಬನ ಅಂತರಂಗದ ತುಡಿತ ಹೇಗೆ ಅಭಿವ್ಯಕ್ತಿಗೊಳ್ಳುತ್ತದೆ ಎಂಬುದನ್ನು ನಾವು ಈ ಕಥಾಸಂಕಲನದಲ್ಲಿ ಕಾಣಬಹುದು.

ತಿಳಿದೋ–ತಿಳಿಯದೆಯೋ ನಾವು ಕಟ್ಟಿಕೊಳ್ಳುವ ಅನೇಕ ಸಂಬಂಧಗಳು . . . ನಮ್ಮಿಂದ ಒಮ್ಮೊಮ್ಮೆ ಅತಿಯಾದುದನ್ನು ನಿರೀಕ್ಷಿಸುತ್ತವೆ. ನಿರೂಪಕ . . . ಈ ಕಥೆಗಳಲ್ಲಿ ಹತಾಶನಾಗಿ ಕೆಲವು ಸಂಬಂಧಗಳಲ್ಲಿ ತೀವ್ರವಾದ ಮಾನಸಿಕ ಒತ್ತಡವನ್ನು

ಅನುಭವಿಸುತ್ತಾನೆ. ಹೊರಬರಲು ಪ್ರಯತ್ನಿಸಿದಷ್ಟೂ . . . ಮತ್ತೆ ಮತ್ತೆ ಅವುಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ.

'ಸಂಪರ್ಕ', 'ಲಗ್ಗೆ', 'ಅಂತಃಪಟ' ಮುಂತಾದ ಕಥೆಗಳು ತಮ್ಮದಲ್ಲದ ತಪ್ಪಿಗೆ, ವಿಧಿಯಿಲ್ಲದೆ ನೋವನ್ನು ಅನುಭವಿಸಬೇಕಾಗಿ ಬರುವ ವಿಪರ್ಯಾಸವನ್ನು ಅತ್ಯಂತ ಯಶಸ್ವಿಯಾಗಿ ಚಿತ್ರಿಸುತ್ತವೆ.

ಅಪಾರ ಆಸೆ-ಆಕಾಂಕ್ಷೆಗಳಿಂದ ವ್ಯಾಪಾರವನ್ನು ಆರಂಭಿಸಿ ತನಗೆ ಕೊಂಚವೂ ಗೊತ್ತಾಗದಂತೆಯೇ ಒಂದು ಮಾಫಿಯಾ ಜಾಲದಲ್ಲಿ ಸಿಕ್ಕಿಬೀಳುವ ಮತ್ತು ಆ ಕಾರಣದಿಂದ ತನ್ನ ಹೆಂಡತಿಯೂ ಸೇರಿದಂತೆ ಎಲ್ಲರೂ ತನ್ನ ಮೇಲೆ ಲಗ್ಗೆ ಮಾಡುವುದನ್ನು 'ಲಗ್ಗೆ' ಕಥೆ ಅನಾವರಣ ಮಾಡುತ್ತದೆ.

ಸಿಂಪಿ ಮಹಾದೇವನ ಚಪಲತೆ ಕೌಟುಂಬಿಕ ಅಸಾಂಗತ್ಯವನ್ನು ಅತ್ಯಂತ ಪರಿಣಾಮಕಾರಿಯಾಗಿ ದಾಖಲಿಸುತ್ತದೆ. ಬಡತನದಿಂದ ಹಂತ ಹಂತವಾಗಿ ಹೊರಬರುವ ಮಹಾದೇವ ನಗರದ ಥಳುಕು ಬಳುಕಿಗೆ ಒಳಗಾಗಿ ಮನಸ್ಸನ್ನು 'ಮಾರಿಕೊಳ್ಳುವ' (ಮಾನಸಿಕವಾಗಿ) ಹಂತಕ್ಕೆ ತಲುಪುವುದು ಸೋಜಿಗವೆನಿಸುತ್ತದೆ.

ಮನುಷ್ಯನ ಜೀವನಕ್ಕೊಂದು ಆರ್ಥಿಕ ಆಧಾರ ಬೇಕು. ಆದರೆ, ಅದು ಸಮಾಜದ ರೂಢಿಗತ ಮೌಲ್ಯಗಳನ್ನು ಮತ್ತು ಜೀವನಕ್ರಮವನ್ನು ಒಪ್ಪದೇ ಇದ್ದಾಗ ಏನಾಗುತ್ತದೆ? ವ್ಯಕ್ತಿಯೊಬ್ಬ ತನ್ನ ಹೃದಯದ ಭಾವನೆಗಳಿಗೆ ಓಗೊಟ್ಟು, ಸಮುದ್ರವನ್ನು ಅಪ್ಪಿಕೊಂಡು ಕೆಲಸ ಮಾಡುತ್ತಿರುತ್ತಾನೆ. ಅವನ ಸಹೋದರ ಅಡಿಕೆ ದಲ್ಲಾಳಿ ವ್ಯಾಪಾರ ಮಾಡುತ್ತಾ ಅಪಾರ ಹಣ ಗಳಿಸುತ್ತಾನೆ. ಈ ಮಾನಸಿಕ ಹಾಗೂ ವ್ಯಾವಹಾರಿಕ ಜಗತ್ತುಗಳ ಶೀತಲಯುದ್ಧವನ್ನು ವಿವೇಕ ಶಾನಭಾಗರು 'ಲಂಗರು' ಎಂಬ ಕಥೆಯಲ್ಲಿ ಅತ್ಯಂತ ಮಾರ್ದವವಾಗಿ ಚಿತ್ರಿಸಿದ್ದಾರೆ.

ರಘುವೀರ ಮತ್ತು ಅನಂತ ಪರಸ್ಪರ ವಿರುದ್ಧ ಮನೋಭಾವದ ಸಹೋದರರು. ರಘುವೀರ ಸರಳ ಜೀವಿ. ಹಡಗಿನಲ್ಲಿ ಸಮುದ್ರ ಪ್ರಯಾಣ ಮಾಡುತ್ತಾ, ಆ ಮೂಲಕ ಸುತ್ತಮುತ್ತಲ ಸುಂದರ, ವಿಸ್ಮಯಕಾರಿ ನೋಟಗಳನ್ನು ಸವಿಯುತ್ತಾ ಸಂತಸಪಡುವ ಭಾವಜೀವಿ. ಮೀನಿನ ಹಿಂಡುಗಳು, ಆಕಾಶದ ನಕ್ಷತ್ರಗಳು, ಸಮುದ್ರದ ಅಲೆಗಳು ಇವುಗಳೊಡನೆ ಒಂದು ಬಗೆಯ ಆಪ್ತ ಸಂಬಂಧವನ್ನು ಬೆಳೆಸಿಕೊಂಡಿರುತ್ತಾನೆ. ಹಣಗಳಿಕೆ, ಆಸ್ತಿ ಸಂಗ್ರಹ, ವಸ್ತುಗಳ ಕೊಂಡುಕೊಳ್ಳುವಿಕೆ, ಆಭರಣಗಳ ಲಾಲಸೆ, ಹೆಸರುಗಳಿಸುವ ಕುಟುಂಬವನ್ನು ಆರ್ಥಿಕವಾಗಿ ಸದೃಢಗೊಳಿಸುವ ಯಾವುದೇ ರೀತಿಯ 'ಲೌಕಿಕ' ಆಸಕ್ತಿಗಳೂ ಅವನಿಗಿರುವುದಿಲ್ಲ. ನಿರುಪದ್ರವಿ ರಘುವೀರನಿಗೆ 'ಭೋಳೆ' ಎಂಬ ಬಿರುದು ಬಳುವಳಿಯಾಗಿ ಬರುತ್ತದೆ.

ಇನ್ನೊಂದು ಕಡೆ ಈತನ ಸಹೋದರ ಅನಂತ ಬಹಳ ಮಹತ್ವಾಕಾಂಕ್ಷಿ. ದುಡ್ಡು, ಹೆಸರು, ಆಸ್ತಿ, ಕುಟುಂಬ ಸೌಖ್ಯ ಎಲ್ಲವೂ ಅವನಿಗೆ ಮುಖ್ಯ. ಅಡಿಕೆ ದಲಾಲಿ ವ್ಯಾಪಾರ ಮಾಡುತ್ತಾ ಅಪಾರ ಹಣವನ್ನು ಗಳಿಸುತ್ತಾನೆ. ಹೆಂಡತಿ–ಮಕ್ಕಳೊಡನೆ ಸುಖವಾಗಿದ್ದು, ಊರಿನಲ್ಲಿ ಸ್ಥಾನ–ಮಾನಗಳನ್ನು ಪಡೆಯುತ್ತಾನೆ.

ರಘುವೀರನ ದುರಾದೃಷ್ಟವೋ ಏನೋ ಎಂಬಂತೆ ಹಡಗಿನ ಮೂಲಕ ಮುಂಬಯಿಯಿಂದ ಸಾಮಾನು ಸಾಗಿಸುವುದು ನಿಂತು ಹೋಗಿ, ಕೆಲಸವೇ ಇಲ್ಲದೇ, ರಘುವೀರನ ಸರಳ, ಶಾಂತ ಬದುಕು ಅಲ್ಲೋಕಲ್ಲೋಲವಾಗುತ್ತದೆ.

ತಾನು ಇಷ್ಟಪಟ್ಟ ಕೆಲಸದಲ್ಲಿ ಯಶಸ್ಸನ್ನು ಸಾಧಿಸಬೇಕೆಂಬ ಹಂಬಲ ರಘುವೀರನಿಗಿಲ್ಲ. ಆದರೆ, ಆ ಕೆಲಸದಲ್ಲಿ ಅವನಿಗೆ ದೊರೆತ ಮಾನಸಿಕ ನೆಮ್ಮದಿ ಯಾರಿಗೂ ಅರ್ಥವಾಗುವುದಿಲ್ಲ. ರಘುವೀರನ ಅಂತರಂಗದ ತುಡಿತ ಯಾರಿಗೂ ಅರ್ಥವಾಗುವುದಿಲ್ಲ. ಮಚವೆಯಲ್ಲಿ ತಿರುಗಾಡಿದ ದಿವಸಗಳಲಿ ಮನಸ್ಸಿಗೆ ದೊರೆತ ಸುಖ. ಸಮಾಧಾನಗಳ ಅರ್ಥ, ಅಲ್ಲಿ ತಾನು ಸಾಧಿಸಿದ್ದು, ಅರಿತಿದ್ದು, ಬೆಳೆದದ್ದು ಯಾರಿಗೂ ತಿಳಿಸಲಾಗದ ಹಾಗೆ ಅನಿಸುತ್ತಿತ್ತು. ಸಾಧನೆಯ ಹಾದಿ ಲೌಕಿಕದ್ದೇ ಆಗಿರಬೇಕು ಅಪೇಕ್ಷೆ ಎಲ್ಲರಿಗೂ' – ರಘುವೀರ (ಲಂಗರು–ಕಥಾಸಂಕಲನ).

ಇದೇ ಸಾರಾಂಶದ ಮತ್ತೊಂದು ಕಥೆ "ಮೋಹನ ಮುರಲಿ" ಕಲೆಯ ಹಂಬಲದಿಂದ ಊರೂರು ತಿರುಗುವ ಯಕ್ಷಗಾನ ಪ್ರೇಮಿ ರಾಮರಾಯನ ಬದುಕು ಇತರ ಸಾಮಾನ್ಯ 'ಲೌಕಿಕ'ರಿಗೆ 'ವಿಕ್ಷಿಪ್ತ' ಅನಿಸುತ್ತದೆ.

ಬಾಲ್ಯದಿಂದಲೂ 'ಯಕ್ಷಗಾನ' ದಿಂದ ಸಮ್ಮೋಹಿತನಾದ ರಾಮರಾಯನ ಮನೋಭಾವವನ್ನು ಅವನ ಅಪ್ಪ 'ಇದು ಪ್ರಾಪ್ತಿ ಹುಟ್ಟದ ಕೆಲಸ' ಎಂದು ತಿರಸ್ಕರಿಸುತ್ತಾನೆ. ಆದರೆ, ತಂದೆಯ ಹಠ ಮಗನ ಆಸೆಯನ್ನು ತಿರುಚುವಲ್ಲಿ ವಿಫಲವಾಗುತ್ತದೆ. ಗೆಳೆಯರು, ಬಂಧು–ಬಾಂಧವರು, ಸುತ್ತಮುತ್ತಲಿನವರು ಈ ಹುಚ್ಚಾಟವನ್ನು ಕೈಬಿಟ್ಟು ಯಾವುದಾದರೂ ನಾಲ್ಕು ಕಾಸು ಬರುವ ಉದ್ಯೋಗವನ್ನು ಮಾಡೆಂದು ಹೇಳಿದರೂ ರಾಮರಾಯ ಕೇಳುವುದಿಲ್ಲ.

ಮದುವೆಯಾದ ಹೆಂಡತಿಗೂ ರಾಮರಾಯನ ಈ ಅಲೆದಾಟವೆಂದರೆ ಅಸಡ್ಡೆ. ಕೊನೆಗೆ ಅವನ ಮಗನೂ ಸಹ ನಿರ್ಲಕ್ಷ್ಯಭಾವ ತೋರಿದಾಗ . . . ಹಿರಿಯರು ಮತ್ತೆ ರಾಮರಾಯರಿಗೆ ತಮ್ಮ 'ಬುದ್ಧಿಭಾವ'ವನ್ನು ಬಿಚ್ಚಿಡುತ್ತಾರೆ. ಆದರೆ ಏನೂ ಪ್ರಯೋಜನವಾಗುವುದಿಲ್ಲ.

ರಾಮರಾಯರ ಹೆಂಡತಿ, ಮಗನ ಜೊತೆಯಲ್ಲಿ ಹೊರಟು ಹೋಗುತ್ತಾಳೆ. ಯಕ್ಷಗಾನವನ್ನು ತನ್ನ ಜೀವನದ ಉಸಿರನ್ನಾಗಿ ಮಾಡಿಕೊಂಡಿದ್ದ ರಾಮರಾಯರ ಪರಿಸ್ಥಿತಿಗೆ ಸುತ್ತಮುತ್ತಲಿನವರು 'ಅಯ್ಯೋ ಪಾಪ' ಎಂದು ಮರುಗುತ್ತಾರೆ.

ತನ್ನನ್ನು ಪ್ರೀತಿಯಿಂದ ಕಾಣುವ ಶಿಷ್ಯನಿಗೆ ತನ್ನ ಆಸ್ತಿಯನ್ನು ಬರೆದುಕೊಡಲು ಸಿದ್ಧವಾಗುವ 'ಗುರುತು' ಕಥೆಯ ಆದರ್ಶವಾದಿ ಶಿಕ್ಷಕ ಮುಕುಂದ ಮಾಸ್ತರರು, ತಮ್ಮವರ ಕಣ್ಣುಗಳಲ್ಲಿ ಅಪರಾಧಿ ಸ್ಥಾನದಲ್ಲಿ ನಿಲ್ಲಬೇಕಾಗುತ್ತದೆ. ಎಂದೂ ತಂದೆಯ ಉದ್ಯೋಗ ಹಾಗೂ ಜೀವನ ಪ್ರೀತಿಯನ್ನು ಅರ್ಥಮಾಡಿಕೊಳ್ಳಲಾಗದ ಮಗ ಮತ್ತು ಸೊಸೆ, ಆಸ್ತಿಯ ವಿಚಾರ ಬಂದಾಗ ಅತಿಯಾದ ನಿರೀಕ್ಷೆಯನ್ನು ವ್ಯಕ್ತಪಡಿಸುವುದು ಸ್ವಾರ್ಥದ ಪರಮಾವಧಿ ಎನಿಸುತ್ತದೆ.

ಯಾರೂ ಕಾಣದ ಸಾವಿನ ನಂತರ 'ಯಕ್ಷಪ್ರಶ್ನೆ' ಎಲ್ಲರನ್ನೂ ಕಾಡುವಂತಹುದೇ. ಅದರಲ್ಲಿಯೂ ವಿಶೇಷವಾಗಿ ರೋಗಿಯಾಗಿ ನರಳಿ ನರಳಿ ಇನ್ನೇನು ಯಾವಾಗಲಾದರೂ ಪ್ರಾಣ ಹೋಗಬಹುದು – ಈ ಪರಿಸ್ಥಿತಿಯನ್ನು ತಲುಪಿದ ಮನುಷ್ಯನ ಅಂತರಂಗದ ತುಡಿತ ಹೇಗಿರಬಹುದು? ಯಾವುದೇ ರೀತಿಯ ಪ್ರಾಣಾಪಾಯದ ರೋಗದಿಂದ ನರಳದೇ, ಜೀವನ ಪ್ರವಾಹದಲ್ಲಿ ಎಲ್ಲಾ ಜನಸಾಮಾನ್ಯರಂತೆ ಮುಳುಗಿ ಅದರ ಸ್ವರೂಪ, ಅರ್ಥಗಳ ಬಗ್ಗೆ ತಲೆಕೆಡಿಸಿಕೊಳ್ಳದೆ . . . ಮುಂದೆ ಸಾಗುತ್ತಿರುವಾಗ ಇದ್ದಕ್ಕಿದ್ದಂತೆ ಬಂದು ಅಪ್ಪಳಿಸುವ ಸಾವಿನ ಮುನ್ಸೂಚನೆ ಮನುಷ್ಯನ ಮೇಲೆ ಯಾವ ರೀತಿಯ ಮಾನಸಿಕ ಆಘಾತವನ್ನು ಉಂಟುಮಾಡಬಲ್ಲದು? ಈ ಎರಡನೆ ಪ್ರಕಾರದ ಆಘಾತಕಾರಿ ಪರಿಸ್ಥಿತಿಯಲ್ಲಿ ಸಿಲುಕಿದವನ ಕಥೆಯೇ 'ವಿಚಿತ್ರ ಕಥೆ'.

ವಿವೇಕ ಶಾನಭಾಗರ 'ಘಾಚರ್ ಗೋಚರ್' (2012) ಎಂಬ ಕಥಾ ಸಂಕಲನದಲ್ಲಿರುವ 'ವಿಚಿತ್ರ ಕಥೆ' ಸಾವಿನ ಅಂಚಿನಲ್ಲಿ ನಿಂತು ಇದುವರೆಗೆ ಬಾಳಿದ ಬದುಕಿನ ಅವಲೋಕನ ಮಾಡುವ ಮನಸ್ಥಿತಿಯ ಚಿತ್ರಣ ಈ ಕಥೆಯಲ್ಲಿ ಮನಕಲಕುವಂತೆ ಮೂಡಿ ಬಂದಿದೆ. ಈ ಕಥೆಯ ರಾಚನಿಕ ಸ್ವರೂಪ ವಿಭಿನ್ನವಾಗಿ ಮೂಡಿ ಬಂದಿದ್ದು, ಸಾಧಾರಣ ಕಥೆಯಾಗುವ ಹಾದಿಯಿಂದ 'ವಿಚಿತ್ರ ಕಥೆ' ಪಾರಾಗಿದೆ ಎಂದು ಹೇಳಬಹುದು.

ಚಂದ್ರಶೇಖರ ಎಂಬ ಪ್ರಸಿದ್ಧ ಲೇಖಕ ತನ್ನ ತಿರುಗಾಟದ ಹಾದಿಯಲ್ಲಿ 'ಶಿಲ್ಲಾಂಗ್' ಪ್ರದೇಶಕ್ಕೆ ಭೇಟಿ ನೀಡುತ್ತಾನೆ. ಕನ್ನಡದಲ್ಲಿ ಮಾತನಾಡಿ, ಪರಿಚಿತನಾಗುವ ವ್ಯಕ್ತಿಯ ಕಥೆಯೇ 'ವಿಚಿತ್ರ ಕಥೆ'. 'ಸತ್ಯವನ್ನು ನಿಭಾಯಿಸೋದು ಅಷ್ಟು ಸುಲಭವಲ್ಲ' ಎಂದು ಪೀಠಿಕೆ ಹಾಕುತ್ತಾ, ತಾನು ಐದು ವರ್ಷಗಳಿಂದ ಅಜ್ಞಾತವಾಸ ಅನುಭವಿಸುತ್ತಿರುವುದಾಗಿ ಆ ವ್ಯಕ್ತಿ ಲೇಖಕ ಚಂದ್ರಶೇಖರನಿಗೆ ಹೇಳುತ್ತಾನೆ. 'ಅಜ್ಞಾತವಾಸ'

ವೆಂಬ ಶಬ್ದದಿಂದ ಅಚ್ಚರಿಗೊಂಡ ಲೇಖಕ . . . ಆ ಹೊಸವ್ಯಕ್ತಿಯ ಕಥೆಯನ್ನು ಕೇಳಲು ಉದ್ಯುಕ್ತನಾಗುತ್ತಾನೆ.

ಬಿಟ್ಟೂ ಬಿಡದೆ ತಲೆನೋವು ಬರುತ್ತಿರುತ್ತದೆ. ಸರಿಯಾದ ಕಾರಣ ತಿಳಿಯಲು ಸ್ಕ್ಯಾನಿಂಗ್ ಮಾಡಿಸುತ್ತಾನೆ. ಸ್ಕ್ಯಾನಿಂಗ್ ರಿಪೋರ್ಟ್ ನೀಡುವ ಹುಡುಗ ನಿಮ್ಮ ತಲೆ ಬುರುಡೆಯಲ್ಲಿ ಕ್ಯಾನ್ಸರ್ ಎಲ್ಲಾ ಕಡೆ ಹಬ್ಬಿದೆ. ಕೂಡಲೇ ಡಾಕ್ಟಾರ್ ಸಹಾಯ ಬೇಕು ಎನ್ನುತ್ತಾನೆ. ಹೆದರುತ್ತಲೇ ಡಾಕ್ಟರ್ ಅವರನ್ನು ಭೇಟಿ ಮಾಡಿದಾಗ, 'ಧೈರ್ಯ ತಂದುಕೊಳ್ಳಿ, ತುಂಬಾ ಬೆಳೆದುಬಿಟ್ಟಿದೆ . . . ಈ ಸ್ಟೇಜಲ್ಲಿ ಬಹಳ ಕಷ್ಟ . . . ಎಷ್ಟು ದಿನಾಂತ ಹೇಳಕ್ಕಾಗಲ್ಲ' ಎನ್ನುತ್ತಾರೆ.

ಆಘಾತಕ್ಕೆ ಒಳಗಾದರೂ ಸಾವರಿಸಿಕೊಂಡು ಮನೆಗೆ ಬಂದು ಹೆಂಡತಿ ಸೀಮಾಳಿಗೆ ಅಳುತ್ತಾ ವಿಷಯ ತಿಳಿಸುತ್ತಾನೆ. ಮನಸ್ಸಿಗೆ ನೋವಾದರೂ ತೋರಿಸಿಕೊಳ್ಳದ ಸೀಮಾ, 'ಎಲ್ಲಾ ಸರಿ ಹೋಗುತ್ತೆ' ಎಂದು ಧೈರ್ಯ ಹೇಳಿ, ಕ್ಯಾನ್ಸರ್ ಚಿಕಿತ್ಸೆ ಮಾಡುವ ತಜ್ಞರಿಂದ ಆಸ್ಪತ್ರೆಯಲ್ಲಿ ಅಪಾಯಿಂಟ್‌ಮೆಂಟ್ ತೆಗೆದುಕೊಳ್ಳುತ್ತಾಳೆ.

ನಂತರದ ಮೂರು ದಿನಗಳ ಬೆಳವಣಿಗೆಯ ಬಗ್ಗೆ ಬರೆಯುತ್ತ ವಿವೇಕ ಅವರು . . . ಸಾವನ್ನು ಕಾಯುತ್ತಾ ಕುಳಿತಿರುವ ವ್ಯಕ್ತಿಯೊಬ್ಬನ ಮನಸ್ಥಿತಿ, ಅವನ ಅಂತರಂಗದ ತುಡಿತವನ್ನು ವಿಭಿನ್ನವಾಗಿ ಚಿತ್ರಿಸಿದ್ದಾರೆ.

ಈ ಆಘಾತದಿಂದ ಕೆಲವರು ಅಳಿದುಳಿದಿರುವ ಬದುಕಿನ ಬಗ್ಗೆಯೂ ಆಸ್ಥೆಯನ್ನು ಕಳೆದುಕೊಂಡು ಹತಾಶರಾಗಿ ತಮ್ಮ ಬದುಕನ್ನು ನಾಶ ಮಾಡಿಕೊಳ್ಳಬಹುದು. ಮತ್ತೆ ಕೆಲವರು ಇನ್ನೇನು ನಮ್ಮ ಜೀವನ ಮುಗಿದೇ ಹೋಯಿತೆಂದು ಅಶಿಸ್ತು – ಬೇಜವಾಬ್ದಾರಿ ತನವನ್ನು ರೂಢಿಸಿಕೊಂಡು ಬದುಕಿನ ಬಗ್ಗೆ ತಾಳಿದ್ದ ನಿರ್ಲಕ್ಷ್ಯವನ್ನು ಸಾವಿಗೂ ವಿಸ್ತರಿಸಬಹುದು. ಮತ್ತೂ ಕೆಲವರು ಜೀವನದ ಬಗೆಗಿನ ವ್ಯಾಮೋಹವನ್ನು ಹೆಚ್ಚಿಸಿಕೊಂಡು ಸಾವಿಗೆ ಸೆಡ್ಡು ಹೊಡೆಯಬಹುದು.

ವಿವೇಕ ಶಾನಭಾಗರ ಈ ಕಥೆಯಲ್ಲಿ ನಾವು ಎಂದೂ ಅಂತ್ಯವನ್ನು ಊಹಿಸಲು ಸಾಧ್ಯವಿಲ್ಲ. 'ವಿಚಿತ್ರ ಕಥೆ'ಯ ನಾಯಕನಿಗೆ – ಸಾಯುವ ಮೊದಲು ತನ್ನ ಒಡನಾಟಕ್ಕೆ ಬಂದವರ ಮನೆಗೆ ಎಲ್ಲಾ ಸತ್ಯಗಳನ್ನು ಒದರಿಬಿಡಬೇಕೆಂಬ 'ಖಯಾಲಿ' ಶುರುವಾಗುತ್ತದೆ.

'ತಾನು ತುಂಬಾ ಒಂಟಿ ಎನಿಸಲಾರಂಭಿಸುತ್ತದೆ. ಸತ್ಯವನ್ನು ಕುರಿತ ವ್ಯಸನ ಪ್ರಾರಂಭವಾಗುತ್ತದೆ. ಇನ್ನೂ ಉಳಿದ ಕೆಲವು ದಿನಗಳಾದರೂ ಸುಳ್ಳು ಹೇಳದೇ ಬದುಕಬೇಕು. ನಿಜಕ್ಕೂ ನನಗೆ ಸೀಮಾಳ ಬಗ್ಗೆ ಅನಿಸೋದನ್ನು ಹೇಳಿಬಿಡಬೇಕು. ನನ್ನ ಕೊನೆಯ ದಿನಗಳನ್ನು ಸತ್ಯದ ಸಹವಾಸದಲ್ಲಿ ಕಳೆಯಬೇಕು ಅನಿಸಿತು. ಈ ವಿಚಾರ ನನ್ನ ಮನಸ್ಸನ್ನು ಹೇಗೆ ಹಿಡಿಯಿತೆಂದರೆ, ನನಗೆ ಅದರಿಂದ ಬಿಡಿಸಿಕೊಳ್ಳಲಾಗಲೇ ಇಲ್ಲ"

ಹೆಂಡತಿಯೊಡನೆ ಜಗಳ, ಅವಳ ಬಗೆಗೆ ಗುಮಾನಿ, ಮನೆಯಲ್ಲಿ ಸದಾ ಕಿರಿಕಿರಿ. ಕಥೆಯ ನಾಯಕ ಬರೀ ತಾನು ಮಾತ್ರ ಸತ್ಯವನ್ನು ಹೇಳುತ್ತಿದ್ದೇನೆಂದು ತಿಳಿದುಕೊಳ್ಳುತ್ತಾನೆ. ಆದರೆ, ಈ ವಿಲಕ್ಷಣ ಹಾದಿಯಲ್ಲಿ ಅವನು ತನ್ನ ಬಗ್ಗೆ ಇತರರಿಗೆ ಏನು ಅನ್ನಿಸುತ್ತದೆ ಎಂಬ ಸತ್ಯಕ್ಕೂ ಮುಖಾಮುಖಿಯಾಗಬೇಕಾಗುತ್ತದೆ.

ಅವನ ಹೆಂಡತಿ, ಸೀಮಾ "ನಿನ್ನ ಬಾಸ್‌ಗೆ ಕೇಳು ನಿನಗೆ ಅವನ ಬಗ್ಗೆ ಏನನ್ಸತ್ತೆ ಅಂತ, ನಿನ್ನ ದೊಡ್ಡಪ್ಪನನ್ನ ಮನೆಯಿಂದ ಓಡಿಸು, ನಿನ್ನ ಪಾಲು ಕೇಳು . . . . " ಇತ್ಯಾದಿ ತನ್ನ ಮನಸ್ಸಿನ ಕಹಿಯನ್ನೆಲ್ಲಾ ಕಾರಿಕೊಳ್ಳುತ್ತಾಳೆ.

ಒಬ್ಬೊಬ್ಬರಿಗೇ ದೂರವಾಣಿಯ ಮೂಲಕ ಫೋನ್ ಮಾಡಿ, ತನ್ನ ಮನಸ್ಸಿನಲ್ಲಿರುವ ಅಸಮಾಧಾನ, ದ್ವೇಷವನ್ನೆಲ್ಲಾ ಕಾರಿಕೊಳ್ಳುತ್ತಾನೆ. ಕೇಳಿದವರು ಸುಮ್ಮನಿರುವುದಿಲ್ಲ. ಈತನ ರೋಗದ ಬಗ್ಗೆ ತಿಳಿದವರು "ಸುಮ್ಮನೆ ಸಾಯೋ ಕಾಲಕ್ಕೆ ಶತ್ರುಗಳನ್ನು ಕಟ್ಟಿಕೊಳ್ಳಬೇಡ" ಎಂದು ಉಪದೇಶ ಮಾಡುತ್ತಾರೆ. ಇನ್ನೂ ಕೆಲವರು . . . ಸಹಜವಾಗಿ, "ನೀನು ಎಂಥವನು ಅಂಥ ಈಗಲಾದರೂ ಗೊತ್ತಾಯ್ತಲ್ಲ" ಅಂತ ಪ್ರತಿಕ್ರಿಯಿಸುತ್ತಾರೆ.

ಸಾವು ಸಾವು ಎಂಬ ಚಿಂತನೆ, ಅಳುಕು, ಬೇರೆಯವರೆಲ್ಲಾ ನಾನು ಸತ್ತರೂ ತಮ್ಮ ಪಾಡಿಗೆ ತಾವು ಸುಖವಾಗಿರುತ್ತಾರೆಂಬ ಆಲೋಚನೆ, ಅವನನ್ನು ಕೆಸರಿನ ಆಲಕ್ಕೆ ಕಮಲದ ಬೇರು ಮುಳುಗಿದಂತೆ ಕೇವಲ ಅಹಿತಕರ ಮಾತುಕತೆಗಳಲ್ಲಿ ಮುಳುಗಿಸಿಬಿಡುತ್ತದೆ. ಎಲ್ಲರ ಅನುಕಂಪ ನೀರಲ್ಲಿ ಉಪ್ಪು ಕರಗಿದಂತೆ ಕರಗಿ, ಅದು ದ್ವೇಷ, ನಕಾರಾತ್ಮಕವಾಗಿ ಬದಲಾಗುತ್ತದೆ. ಅವನು ಯಾರಿಗೂ ಬೇಡವಾಗಿಬಿಡುತ್ತಾನೆ.

ಮೂರು ದಿನಗಳ ನಂತರ ಲ್ಯಾಬಿನಲ್ಲಿ ಕೆಲಸ ಮಾಡುತ್ತಿದ್ದ ಓಂಕಾರ್ ಇವನನ್ನು ಹುಡುಕಿಕೊಂಡು ಬರುತ್ತಾನೆ. ಅವನು ಕೊಟ್ಟ ಸ್ಕ್ಯಾನಿಂಗ್ ರಿಪೋರ್ಟ್ ಇವನದಲ್ಲವೆಂದೂ, ತಪ್ಪಾಗಿ ಬೇರೆಯವರ ರಿಪೋರ್ಟ್ ಇವನಿಗೆ ಸೇರಿತೆಂದು ತಿಳಿಸಿ, ಮತ್ತೊಮ್ಮೆ ಸ್ಕ್ಯಾನ್ ಮಾಡಿಸಲು ಇವನನ್ನು ಕರೆದುಕೊಂಡು ಹೋಗುತ್ತಾನೆ.

ಆ ರಿಪೋರ್ಟ್ 'ಎಲ್ಲಾ ಸರಿಯಾಗಿದೆ' ಎಂದು ಹೇಳುತ್ತದೆ. ಗೊಂದಲ ಮತ್ತು ಸಂತೋಷಗೊಂಡ . . . ಈ ರೋಗಿಯಲ್ಲದ . . . ರೋಗಿ! ಎಲ್ಲಾ ಸರಿಯಾಗಿದೆ ಎಂದು ತಿಳಿದ ಮೇಲೆ, ನನ್ನೊಳಗೆ ಹುಟ್ಟಿದ ಆ ಸಾವಿನ ಪ್ರಜ್ಞೆ ಏನೂ ಆಗೇ ಇರಲಿಲ್ಲವೇನೋ ಎಂಬಷ್ಟು ವೇಗದಲ್ಲಿ ಕರಗಿಹೋಯಿತು" . . ಎನ್ನುತ್ತಾನೆ. (ಪುಟ ಸಂಖ್ಯೆ 122, ಫಾಚರ್ ಫೋಚರ್ ಕಥಾಸಂಕಲನ).

“ನಾನೀಗ ಸಾಯಲ್ಲ ಅಂದ ಮೇಲೆ ಸೀಮಾಳ ಅನುಕಂಪ ಮಾಯವಾಗಿ ನಮ್ಮ ಸಂಬಂಧ ಶೀತಲವಾಯಿತು”.

ಎಂತಹ ದುರಂತವಲ್ಲವೇ? ಕೆಲಸದ ಸ್ಥಳದಲ್ಲಿಯೇ ಎಲ್ಲರ ನಾಲಿಗೆಯಲ್ಲಿ ಕಹಿಯನ್ನು ಬಿತ್ತಿದ ಮೇಲೆ ಆಫೀಸಿಗೆ ಹೋಗುವುದು ಸಾಧ್ಯವಿರಲಿಲ್ಲ. ಮನೆಯಿಂದಲೇ ರಾಜೀನಾಮೆ ಪತ್ರವನ್ನು ಕಳುಹಿಸುತ್ತಾನೆ. ಹೆಂಡತಿಯಿಂದ ದೂರವಾಗಿ, ಯಾರಿಗೂ ಗೊತ್ತಿರದ ಸ್ಥಳಕ್ಕೆ ಬರಬೇಕೆಂದು ನಿರ್ಧರಿಸಿ ಶಿಲ್ಲಾಂಗ್‌ಗೆ ಬರುತ್ತಾನೆ. ಸ್ಥಳ ಬದಲಾಗುತ್ತದೆ . . ಅಂತರಂಗ ಬದಲಾಗುವುದಿಲ್ಲ.

ಈ “ವಿಚಿತ್ರ ಕಥೆ”ಯನ್ನು ಓದಿದ ನಂತರ ನಮ್ಮ ಮನಸ್ಸಿನಲ್ಲಿ ಉಳಿಯುವ ಪ್ರಶ್ನೆ “ಸತ್ಯ ಅಂತ ನಾನು ಆ ಒಂದು ದಿನ ಹಲುಬಿದ್ದು ಉನ್ಮಾದವಾಗಿತ್ತು ಅಷ್ಟೇ”.

ಸಾಮಾನ್ಯ ಮನುಷ್ಯರಾದ ನಾವು ಸದಾ ಒಳ್ಳೆಯವರೆಂದು ತೋರಿಸಿಕೊಳ್ಳಲು ಇಚ್ಛಿಸುತ್ತೇನೆ. . . . ಸತ್ಯವಂತರೆಂದು ಅಲ್ಲ. ಹಾಗೆಂದ ಮಾತ್ರಕ್ಕೆ “ಈ ಉನ್ಮಾದ ಸತ್ಯ” ದಿಂದ ಯಾರಿಗೆ ಲಾಭವಿದೆ. ಮೊಟ್ಟ ಮೊದಲನೆಯದಾಗಿ ಯಾವುದು? ಸತ್ಯ. ಅದು ಎಷ್ಟರಮಟ್ಟಿಗೆ ಇತರರಿಗೆ ಸತ್ಯವಾಗಿ ಕಂಡು, ಒಳ್ಳೆಯದನ್ನು ಮಾಡಲು ಸಾಧ್ಯ. ಒಳ್ಳೆಯತನವೆಂದರೆ, ಸತ್ಯವನ್ನು ಮರೆಮಾಚುವುದೇ? ಆಲೋಚನೆಗಳು ಭಿನ್ನಭಿನ್ನವಾಗಿ ಮೂಡಿಬಂದು “ವಿಚಿತ್ರ ಕಥೆ” ನಮ್ಮನ್ನು ಗಂಭೀರ ಚರ್ಚೆಗೆ ಆಹ್ವಾನಿಸುತ್ತದೆ.

## ಅಧ್ಯಾಯ – 5: ವಿವೇಕ ಶಾನಭಾಗರ ಕಥೆಗಳಲ್ಲಿ ಜಾಗತೀಕರಣದ ಸವಾಲುಗಳು

ಲೇಖಕನಿಗೆ ಅತ್ಯಂತ ಅವಶ್ಯಕವಾದ "ಸಾಮಾಜಿಕ ಜವಾಬ್ದಾರಿ"ಯನ್ನು ವಿವೇಕ ಶಾನಭಾಗರೂ ಒಪ್ಪುತ್ತಾರೆ. ಒಳಿತೆಂದರೆ, ಒಬ್ಬನ ಒಳಿತಲ್ಲ, ಅದು ಎಲ್ಲರ ಒಳಿತು. ಆದರೆ ಔದ್ಯೋಗಿಕರಣ ಭಾರತದ ನಗರಗಳ ನಕ್ಷೆಯನ್ನೇ ಬದಲಾಯಿಸಿಬಿಟ್ಟಿತು. ತದನಂತರದಲ್ಲಿ ಬಂದ ಜಾಗತೀಕರಣವಂತೂ ಬಡವರನ್ನು ಇನ್ನೂ ಕಡು ಬಡವರನ್ನಾಗಿ ಮಾಡುತ್ತಾ, ಸಿರಿವಂತರನ್ನು ಸಿರಿತನದ ಉತ್ತುಂಗಕ್ಕೆ ಒಯ್ಯುತ್ತಿದೆ.

ದೇಸಿ ಸಂಸ್ಕೃತಿಯ ವಿನಾಶಕ್ಕೆ ತೊಡಗಿರುವ ಈ ಜಾಗತೀಕರಣದ ಸಮಸ್ಯೆಗಳನ್ನು ವಿವೇಕ ಶಾನಭಾಗರು ತಮ್ಮ ಅನೇಕ ಕಥೆಗಳಲ್ಲಿ ತಂದಿದ್ದಾರೆ. ಪ್ರಗತಿ, ಅಭಿವೃದ್ಧಿ, ತಂತ್ರಜ್ಞಾನದ ಕ್ರಾಂತಿಯೆಂದರೆ ಏನು? ಕಳೆದೆರೆಡು ದಶಕಗಳಲ್ಲಿ ಭಾರತ ದೇಶದಲ್ಲಾಗುತ್ತಿರುವ ಆರ್ಥಿಕ ಅಸಮಾನತೆ ಈ ಜಾಗತೀಕರಣದ ಕೊಡುಗೆಯಲ್ಲವೇ?

ಪ್ರಗತಿಯೆಂದರೆ ಕೇವಲ ಬೃಹತ್ ಅಣೆಕಟ್ಟುಗಳ ನಿರ್ಮಾಣ. ಅಣುಸ್ಥಾವರಗಳ ನಿರ್ಮಾಣ, ಬಹುರಾಷ್ಟ್ರೀಯ ಕಂಪನಿಗಳ ಆಕ್ರಮಣ, ಕೊಳ್ಳುಬಾಕ ಸಂಸ್ಕೃತಿಯನ್ನು ಪೋಷಿಸುತ್ತಿರುವ 'ಮಾಲ್ ಹಾವಳಿ" ಇತ್ಯಾದಿ ಹೊಸ ಹೊಸ ಪಿಡುಗುಗಳ ಪರಿಣಾಮಗಳ ಬಗ್ಗೆ ವಿವೇಕ ಶಾನ್‌ಭಾಗರಿಗೆ ಆತಂಕವಿದೆ.

ಹಳ್ಳಿಗಳು ಹಾಳು ಬಿದ್ದಿವೆ. ಎಲ್ಲಾ ಕಡೆ ಬಿಸ್ಲೆರಿ ನೀರು ಹಣಕೊಟ್ಟರೆ ಸಿಗುತ್ತದೆ. ವಯಸ್ಸನ್ನು ಮೀರಿದ ಅತಿ ಸಂಬಳ, ಅಕ್ಷರಸ್ಥರನ್ನು ಭಾವನಾತ್ಮಕತೆಯಿಂದ ನಿರ್ಲಕ್ಷ್ಯದ ಕಡೆಗೆ ಕೊಂಡೊಯ್ಯುತ್ತಿದೆ.

ಬದಲಾಗುತ್ತಿರುವ ಸಾಮಾಜಿಕ ಹಾಗೂ ಆರ್ಥಿಕ ಮನ್ವಂತರಗಳಿಗೆ ಸ್ಪಂಧಿಸುವ ವಿವೇಕ ಶಾನಭಾಗರ "ಹುಲಿ ಸವಾರಿ" (1995) ಕಥಾ ಸಂಕಲನದಲ್ಲಿ ಜಾಗತೀಕರಣದ ಬಿಸಿಯನ್ನು ಒಳಗೊಂಡ ಅತ್ಯಂತ ಯಶಸ್ವಿ ಕಥೆಗಳಿವೆ.

"ಹುಲಿ ಸವಾರಿ" ಮತ್ತು "ಕಂತು" ಎಂಬ ಕಥೆಗಳು ಜಾಗತೀಕರಣದ ಪರಿಣಾಮವನ್ನು ಅತ್ಯಂತ ಪರಿಣಾಮಕಾರಿಯಾಗಿ ಪ್ರತಿನಿಧಿಸುವ ಕಥೆಗಳಂತೆ ಕಂಡು ಬರುತ್ತವೆ.

ಗ್ರಹಣ ಮತ್ತು ಅಣೆಕಟ್ಟು ಯೋಜನೆಯಿಂದ ಊರಿನ ಮುಳುಗಡೆ – ಈ ಕ.ಥಾಅಸ್ತುವನ್ನು ಹೊಂದಿರುವ "ಕಂತು" ಎಂಬ ನೀಳ್ಗತೆಯು, ಶ್ರೀ ಚನ್ನಕೇಶವ ಅವರ ನಿರ್ದೇಶನದಲ್ಲಿ ರಂಗರೂಪವಾಗಿಯೂ ಪರಿವರ್ತಿತಗೊಂಡು ಜನಪ್ರಿಯವಾಗಿದೆ.

"ಕಂತು" ಕಥೆಯಲ್ಲಿ ಮುಖ್ಯವಾಗಿ ಮೂರು ಪದರುಗಳಿವೆ. ಒಂದೇ ಆವರಣದಲ್ಲಿ ಏಕಕಾಲಕ್ಕೆ ಪರಸ್ಪರ ಪೂರಕವಾಗಿಯೂ, ಸಮಾನಾಂತರವಾಗಿಯೂ ಮೂಡಿ ಬಂದಿವೆ.

"ಮಾವಿನೂರು" ಎಂಬ ಸಣ್ಣ ಕುಗ್ರಾಮದ ಭಿನ್ನ ವ್ಯಕ್ತಿಗಳನ್ನು ಹಾಗೂ ಸಮುದಾಯಗಳನ್ನು ಬದಲಾಗುವ ಪರಿಸ್ಥಿತಿಗಳು ನಿರೀಕ್ಷೆಗೂ ಮೀರಿ ಬದಲಾಯಿಸಿ ಬಿಡುತ್ತವೆ. ಶಾಲಾ ಶಿಕ್ಷಕರಾದ ಸದಾನಂದ ಮಾಸ್ತರರು ವಿದ್ಯಾರ್ಥಿಗಳಲಿ 'ವೈಜ್ಞಾನಿಕ' ಮನೋಭಾವವನ್ನು ಬೆಳೆಸಲು ಹೆಣಗಾಡುತ್ತಿರುವವರು, ತಮ್ಮ ಪತ್ನಿಯ ಮಾನಸಿಕ ಅಸ್ವಸ್ಥತೆ ಅವರ ಹುಮ್ಮಸ್ಸನ್ನು ಸ್ವಲ್ಪವೂ ಕುಗ್ಗಿಸುವುದಿಲ್ಲ. ವಿದ್ಯಾರ್ಥಿಗಳಿಗೆ ಬೇಗನೇ ಏನೂ ಅರ್ಥವಾಗುವುದಿಲ್ಲ. ಇದರಿಂದ ಮಾಸ್ತರರ ಬೋಧನೆಯೂ ವಿಚಲಿತಗೊಳ್ಳುತ್ತದೆ. ಗ್ರಹಣವನ್ನು ರಾಹು–ಕೇತು ಹಾಗೂ ಪಾಪ–ಪುಣ್ಯಗಳಿಗೆ ಗಂಟು ಹಾಕುವ ತರ್ಕಶಾಸ್ತ್ರಗಳು, ಪೂರ್ಣ ಸೂರ್ಯಗ್ರಹಣ ಕಾಣಿಸುವುದು ಮಾವಿನೂರಿನಲ್ಲಿ ಮಾತ್ರ ಎಂಬ ಕಾರಣಕ್ಕಾಗಿ ಗ್ರಹವೀಕ್ಷಣೆಗೆಂದು ಅಲ್ಲಿಗೆ ಬರುವ ವಿದೇಶಿ ಪ್ರವಾಸಿಗಳು ಮತ್ತು ವಿಜ್ಞಾನಿಗಳು, ಮುಳುಗಡೆಯ ಫಾಯಿದೆಯನ್ನು ಪಡೆಯಲು ಊರಿನ ಪಾಳು ಭೂಮಿಯನ್ನೆಲ್ಲಾ ಖರೀದಿಸುವ ಜಗನ್ನಾಥ ಮತ್ತು ಅಂತಹ ವ್ಯವಹಾರ ಕುಶಲನಲ್ಲದ ಪಾಂಡುರಂಗ, ಅಣೆಕಟ್ಟು ವಿರೋಧಿ ಸಮಿತಿಯವರು ಮತ್ತು ಮಹಮ್ಮಾಯಿ ದೇವಸ್ಥಾನದಲ್ಲಿ ಎಲ್ಲಿಯೋ ಹುಗಿಯಲ್ಲಿಟ್ಟಿರುವ ನಿಧಿಯನ್ನು ಶೋಧಿಸುತ್ತಿರುವ ಗಂಗಾಧರ, ಏನೇ ಆದರೂ ತನ್ನ ಹಳೆಯ ಮನೆಯನ್ನು ಬಿಡಲೊಪ್ಪದ ಕಾವೇರಿ, ಇತ್ಯಾದಿ ಭಿನ್ನ ನಂಬಿಕೆ ಮತ್ತು ವರ್ತನೆಗಳ ಅನೇಕ ಪಾತ್ರಗಳ ಮೂಲಕ "ಇಡೀ ಊರಿಗೇ ಊರೇ ಮಾರಾಟಕ್ಕೆ ಇಟ್ಟಂತೆ" ಆಗಿಬಿಡುತ್ತದೆ.

ಇದು ಇಂದು ಭಾರತೀಯ ಸಮಾಜದಲ್ಲಿ ಜಾಗತೀಕರಣದಿಂದ ಆಗುತ್ತಿರುವ ಪರಿಣಾಮ. ಮನುಷ್ಯ ಸಂಬಂಧಗಳ ಬೆಲೆಯನ್ನು ಅರಿಯಿಲದೇ, ಮಾನವೀಯತೆಯ ಮರೆತು ಕೇವಲ ಹಣದ ಹಪಹಪಿಗೆ ಬೀಳುವ ಹಳ್ಳಿ . . . (ಮಾವಿನೂರು) ಕಳೆದೆರೆಡು ದಶಕಗಳಲ್ಲಿ ಕ್ಷಿಪ್ರ ಹಾಗೂ ಸ್ವವಿರೋಧಗಳಿಮ್ದ ಕೂಡಿದ ಬದಲಾವಣೆಗೆ ತನ್ನನ್ನು ಒಡ್ಡಿಕೊಂಡಿರುವ ಇಡೀ ಭಾರತದ ಒಂದು ಕಿರು ಪ್ರತಿಮೆಯಾಗಿ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ.

ಒಂದು ಸಣ್ಣ ಊರು . . . . ತನ್ನದೇ ಆದ ಗೋಳು, ಆಸಕ್ತಿ ಮತ್ತು ನಿತ್ಯದ ತಾಪತ್ರಯಗಳಲ್ಲಿ ಮುಳುಗಿರುವಾಗ, ಹೊಸ ಸಮಸ್ಯೆ, ಒತ್ತಡಗಳಿಗೆ ಸಿಲುಕಿದಾಗ, ಇವರ ವೈಯಕ್ತಿಕ ಬೇಕು–ಬೇಡಗಳನ್ನು ಗಂಭೀರವಾಗಿ ಪರಿಗಣಿಸುವ ಮನಸ್ಥಿತಿಯಾಗಲೀ, ಆಸಕ್ತಿ ಸಹಾನುಭೂತಿಗಳಾಗಲೀ, ಊರವರ ಪಾಲಿಗೆ ಇನ್ನೂ ನಿಗೂಢವೂ, ಅಸ್ಪಷ್ಟವೂ, ಅಮೂರ್ತವೂ ಆದ "ಪ್ರಭುತ್ವ"ಕ್ಕೆ ಇಲ್ಲ. ವಿದೇಶಿ ಪ್ರವಾಸಿಗಳ ಪ್ರಾಚ್ಯ ವಸ್ತುಗಳ ಮೋಹವನ್ನು ತಮ್ಮ ಲಾಭಕ್ಕೆ ಪರಿವರ್ತಿಸಿಕೊಳ್ಳಲು ಊರಿನವರು ತಮ್ಮ ಮನೆ ಬಾಗಿಲು ಸೇರಿದಂತೆ ತಮ್ಮಲ್ಲಿದ್ದ ಹಳೆಯ ವಸ್ತುಗಳನ್ನೆಲ್ಲಾ ಮಾರಲು ತೊಡಗುವ ಪ್ರಕ್ರಿಯೆ

“ಜಾಗತೀಕರಣಕ್ಕೆ ದೇಶೀತನವನ್ನು ಮಾರುವ” ಪ್ರಕ್ರಿಯೆಯಂತೆ ತೋರುತ್ತದೆ. ಮೌಲ್ಯಗಳು ಕ್ಷೀಣಿಸುತ್ತಿರುವ ವಾಸ್ತವ ಮುಖಕ್ಕೆ ರಾಚುತ್ತದೆ.

ವಿಜ್ಞಾನಿಗಳು, ಪರಿಸರವಾದಿಗಳು, ವಿದೇಶಿಯರು ಹೊರಗಿನಿಂದ ಬರುತ್ತಾರೆ. ಇವರೆಲ್ಲರ ಆಗಮನದ ಪರಿಣಾಮಗಳನ್ನು ಕಥೆಯು ದಟ್ಟವಾದ ವಿವರಗಳಲ್ಲಿ ದಾಖಲಿಸುತ್ತ ಹೋಗುತ್ತದೆ. ಮಾವಿನೂರನ್ನು ಆವರಿಸಿಕೊಳ್ಳುತ್ತಿರುವ ಬದಲಾವಣೆಗಳು ಸರಿಯೋ, ತಪ್ಪೋ ಎಂದು ಯಾರೂ ಯೋಚಿಸುವುದಿಲ್ಲ. ಊರು ಭೌತಿಕವಾಗಿ ಮುಳುಗುವುದಕ್ಕೆ ಮುಂಚೆಯೇ ಆ ಊರಿನ ನಂಬಿಕೆಗಳು, ಮೌಲ್ಯಗಳು, ಸಂಸ್ಕೃತಿ, ಊರು–ಮನೆಯ ಮೇಲಿನ ಅಭಿಮಾನ, ದೇಶಪ್ರೇಮ ಎಲ್ಲವೂ ಮುಳುಗಲಾರಂಭಿಸಿದ ವ್ಯಂಗ್ಯವನ್ನು ಕಥೆ ಅರೆವಿನೋದದಲ್ಲಿ, ಅರೆ ವಿಷಾದದಲ್ಲಿ ಸೂಕ್ಷ್ಮವಾಗಿ ದಾಖಲಿಸುತ್ತದೆ.

ಸಂಕೀರ್ಣವಾದ ಕಥಾ ವಸ್ತು, ಓದುಗರನ್ನು ಚಿಂತನೆಗೆ ಹಚ್ಚುವಲ್ಲಿ ಯಶಸ್ವಿಯಾಗುತ್ತದೆ.

‘ಇಳಿದರೆ ಹುಲಿ ತಿನ್ನುತ್ತದೆ, ಸವಾರಿ ಮಾಡುತ್ತಲೇ ಇದ್ದರೆ ಹಸಿವಿನಿಂದ ಸಾವು, ಹುಲಿಯ ಬೆನ್ನೇರಿದವರಿಗೆ ಅದರಿಂದ ಬಿಡುಗಡೆಯೇ ಇಲ್ಲ’ ಎಂಬ ಮಾತು ‘ಹುಲಿಸವಾರಿ’ ಕಥೆಯ ಮೂಲಕ ನಮ್ಮ ದೇಶವು ಅನುಸರಿಸುತ್ತಿರುವ ಮುಕ್ತ ಮಾರುಕಟ್ಟೆ ಹಾಗೂ ಖಾಸಗೀಕರಣದ ಹಾದಿಯಿಂದ ಹಿಂತಿರುಗಲು ಸಾಧ್ಯವೇ ಇಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಒಂದು ಬಹುರಾಷ್ಟ್ರೀಯ ಕಂಪನಿಯ ಉನ್ನತ ಅಧಿಕಾರಿಗಳಿಗೆ ತರಬೇತಿ ಕೊಡಲು ಮುಂಬಯಿಯಲ್ಲಿ ನಡೆಯುವ ಹತ್ತು ದಿನಗಳ ಶಿಬಿರ ಈ ಕಥೆಯ ಕೇಂದ್ರ. ತರಬೇತಿಯ ಕೊನೆಯ ಮೂರು ದಿನಗಳಲ್ಲಿ ಒಂದು ‘ಮ್ಯಾನೇಜ್‌ಮೆಂಟ್ ಆಟ’ವನ್ನು ಆಯೋಜಿಸಲಾಗುತ್ತದೆ. ಈ ಆಟದಲ್ಲಿ ಅಭ್ಯರ್ಥಿಗಳು ತಮಗೆ ಕೊಟ್ಟ ಕಾಲ್ಪನಿಕ ಕಂಪನಿಗಳ ಮೂಲಕ (ಕಾಲ್ಪನಿಕವಾಗಿ) ಎಷ್ಟು ಲಾಭ ಗಳಿಸುತ್ತಾರೆ ಎಂಬುದನ್ನು ಪರೀಕ್ಷಿಸಲಾಗುತ್ತದೆ.

‘ಹುಲಿಸವಾರಿ’ ಕಥೆಯಲ್ಲಿ ಜೆಫ್ ಡಚ್ ಮೂಲದವ ಮತ್ತು ಇಂಗ್ಲೆಂಡ್‌ನಲ್ಲಿ ಬೆಳೆದವ ಎಂಬುದು ಅರ್ಥಪೂರ್ಣವಾಗಿದೆ. ಅವನು ಲೋಭದ ಆಸೆಯನ್ನು ತೋರಿಸಿಯೋ ಅಥವಾ ಹೆದರಿಸಿಯೋ ‘ಉಚೆ’ಯನ್ನು ತನ್ನ ಯೋಜನೆಗೆ ಒಪ್ಪುವಂತೆ ಮಾಡುತ್ತಾನೆ. ಇಲ್ಲಿ ಪ್ರತಿಭೆ, ಪ್ರಾಮಾಣಿಕತೆ, ಶ್ರದ್ಧೆಗಿಂತ ದುರಾಸೆಯ ಮೂಲಕ ಯುವಕರನ್ನು ಬುಟ್ಟಿಯೊಳಗೆ ಹಾಕಿಕೊಳ್ಳುವ ಹುನ್ನಾರವಿದೆ. ನಮ್ಮ ದೇಶದ ಎಲ್ಲ ಬಹುರಾಷ್ಟ್ರೀಯ ಕಂಪನಿಗಳಲ್ಲಿ ದುಡಿಯುವವರು ಸದಾ ಅನ್ಯರಾಷ್ಟ್ರಗಳಿಗಾಗಿ ಹಗಲು ರಾತ್ರಿ ದುಡಿಯುತ್ತಿದ್ದಾರೆ. ಹಾಗಿದ್ದರೆ ತಮ್ಮ ಸ್ವಂತ ದೇಶಾದ ಅಭಿವೃದ್ಧಿ ಯಾಗುವುದು ಹೇಗೆ?

ಭಾರತೀಯ ನಿರೂಪಕನ ಗುಂಪಿನಲ್ಲಿ ಆಫ್ರಿಕಾದ ಊಚೆ ಡಚ್ ಮೂಲದ ಹಾಗೂ ಇಂಗ್ಲೆಂಡಿನಲ್ಲಿ ಹುಟ್ಟಿ ಬೆಳೆದ ಜೆಫ್ ಇವರಿಬ್ಬರೂ ಇರುತ್ತಾರೆ. ಒಂದು ಸಂದರ್ಭದಲ್ಲಿ, ಹೆಚ್ಚು ಲಾಭ ಪಡೆಯಲು ತಮ್ಮ ಕಂಪನಿ ಆಫ್ರಿಕಾದಲ್ಲಿ ಕಾರ್ಖಾನೆಯನ್ನು ತೆಗೆಯುವ ಯೋಜನೆ ಹೊಳೆದಾಗ ಊಚೆ, "ಅದು ಜನರನ್ನು ನಾಶ ಮಾಡುತ್ತದೆ' ಎಂದು ವಾದಿಸುತ್ತಾ ಅದನ್ನು ವಿರೋಧಿಸುತ್ತಾನೆ. ಆದರೆ, ಅನಂತರ ಜೆಫ್ ತನ್ನದೇ ಆದ ರೀತಿಯಲ್ಲಿ ಅವನ ಮನಸ್ಸನ್ನು ಬದಲಾಯಿಸಿ, ಒಪ್ಪಿಸಿ ಆಟವನ್ನು ಮುಂದುವರೆಸುತ್ತಾನೆ. ಕೊನೆಯ ದಿನ ನಿರೂಪಕನ ಈ ಕಂಪನಿ ಎರಡನೆಯ ಸ್ಥಾನಕ್ಕೆ ಏರುತ್ತದೆ. ಈ ನಡುವೆ ಭಾರತೀಯ ಆಟಗಾರರ ಮನಸ್ಥಿತಿ, ಎಲ್ಲಾ ಸಂವೇದನಾಶೀಲ ಮನುಷ್ಯರ ಪರಿಸ್ಥಿತಿಯನ್ನು ಪ್ರತಿನಿಧಿಸುತ್ತದೆ.

'ಹುಲಿಸವಾರಿ' ಎಂಬ ಧ್ವನಿಪೂರ್ಣ ಶೀರ್ಷಿಕೆ ಭಾರತ, ಆಫ್ರಿಕ, ಮುಂತಾದ ತೃತೀಯ ರಾಷ್ಟ್ರಗಳನ್ನು ಅಮೇರಿಕಾ, ಇಂಗ್ಲೆಂಡ್ ಮುಂತಾದ ಶ್ರೀಮಂತ ರಾಷ್ಟ್ರಗಳು ಆರ್ಥಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹೇಗೆ ಶೋಷಣೆ ಮಾಡುತ್ತವೆ ಎಂಬುದನ್ನು ಅನಾವರಣಗೊಳಿಸುತ್ತದೆ. ಸದ್ದಿಲ್ಲದ ಈ ತಣ್ಣನೆಯ ಕ್ರೌರ್ಯವನ್ನು ಬಡರಾಷ್ಟ್ರಗಳು ಮೌನವಾಗಿ ಒಪ್ಪಿಕೊಂಡಿವೆ.

ವಿವೇಕ ಶಾನಭಾಗರ ಅನೇಕ ಕಥೆಗಳು ಆಧುನೀಕರಣ ಜನಸಾಮಾನ್ಯನ ಜೀವನದ ಮೇಲೆ ಬೀರಿರುವ ಪ್ರತಿಕೂಲ ಪರಿಣಾಮಗಳ ಮೇಲೆ ಬೆಳಕು ಚೆಲ್ಲುತ್ತವೆ. ಜಾಗತೀಕರಣದ ಕರಾಳತೆ ಕೇವಲ ಅಕ್ಷರಸ್ಥ, ವಿದ್ಯಾವಂತರ ಉದ್ಯೋಗಗಳಲ್ಲಿ ಮಾತ್ರ ಬದಲಾವಣೆಯನ್ನು ತಾರದೆ, ನಮ್ಮ ಸಮಾಜದ ಎಲ್ಲಾ ಮೂಲೆಗಳನ್ನು ಮುಟ್ಟಿದೆ.

ಸ್ವಾತಂತ್ರ್ಯ ಲಭಿಸಿದಾಗ ಅತ್ಯಂತ ಕ್ಷುಬ್ಧ ಹಾಗೂ ಬಡ ದೇಶವಾಗಿದ್ದ ಭಾರತ ಇಂದು ಬೃಹತ್ ಔದ್ಯೋಗಿಕರಣದಿಂದ ಆರ್ಥಿಕವಾಗಿ ಬಲಶಾಲಿಯಾಗಿದೆ. ಹಾಗೆಯೇ ಈ ಔದ್ಯೋಗಿಕರಣದಿಂದ ಮನೆ-ಮಠಗಳನ್ನು ಕಳೆದುಕೊಂಡ ಲಕ್ಷಾಂತರ ಜನರು ಬೀದಿ ಪಾಲಾಗಿದ್ದಾರೆ. ರೈತರ ಗೋಳು ಸಹ ಜಾಗತೀಕರಣದ ಕದಂಬ ಬಾಹುಗಳ ಪ್ರತಿಫಲವಾಗಿದೆ. ದೇಶೀಯತೆಯ ತುಳಿದು, ಕೃತಕತೆಯ ಪರದೆಯು ಎಲ್ಲರ ಕಣ್ಣ ಮುಂದೆ ಎಳೆದು ವಿದೇಶಿ ಕಂಪನಿಗಳು ನಡೆಸುತ್ತಿರುವ ಮೋಸದಾಟಗಳು – ಇಂದಿನ ವಾಸ್ತವ ಜಗತ್ತಿನ ಕಠೋರ ಸತ್ಯಗಳನ್ನು ಸಾರುತ್ತವೆ.

ಜಾಗತೀಕರಣದ ಸವಾಲುಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಮತ್ತೊಂದು ಕಥೆ "ನಿರ್ವಾಣ". . . ಮತ್ತೊಂದು ಯಶಸ್ವೀ ಪ್ರಯತ್ನ. ಈ ಕಥೆಯ ನಿರೂಪಕ ಬಹುರಾಷ್ಟ್ರೀಯ ಕಂಪನಿಯೊಂದರ ಉದ್ಯೋಗಿಯಾಗಿ, ಸದಾ ಬೇರೆ ಬೇರೆ ದೇಶಗಳಿಗೆ ಹೋಗುತ್ತಿರುತ್ತಾನೆ.

ಒಂದು ಸಲ ಜಕಾರ್ತಾದಲ್ಲಿ ಇವನಿದ್ದಾಗ, ತನ್ನ ಹೋಟೆಲ್‌ನಲ್ಲಿಯೇ ಇದ್ದ ಮತ್ತೊಬ್ಬ ಭಾರತೀಯ ಹಳೆಯ ಕಲೀಗ್ ಜ್ಯೋತಿರ್ಮಯಿ ಎಂದು ಗುರುತಿಸುತ್ತಾನೆ. ಆತನೂ ಸಹ ನಿರೂಪಕನನ್ನು ಪ್ರಸಿದ್ಧ ಲೇಖಕನಾದ ರತನ್ ಕಾವಲೆ ಎಂದು ಗುರುತಿಸುತ್ತಾನೆ. ಆದರೆ, ಫೋನಿನಲ್ಲಿ ಮಾತನಾಡುವಾಗ ಅವನು ತನ್ನನ್ನು ಫಣೀಶ್ ಎಂದು ಕರೆದುಕೊಳ್ಳುತ್ತಾನೆ.

ತಾಸುಗಟ್ಟಲೆ ತಮ್ಮ ತಮ್ಮ ಕೆಲಸದ ಬಗ್ಗೆ, ಕುಟುಂಬದ ಬಗ್ಗೆ, ಗತಕಾಲದ ಬಗ್ಗೆ ಮಾತನಾಡುತ್ತಾ ರಾತ್ರಿಯನ್ನು ಕಳೆದು ಬೆಳಿಗ್ಗೆ ಹೋಟೆಲ್ ಬಿಡುವಾಗ, ಅವನು ತಾನು 'ಫಣೀಶ್' ಅಲ್ಲ ಎಂದು ಹೇಳುತ್ತಾನೆ ಮತ್ತು ನಿರೂಪಕನೂ ತಾನು 'ರತನ್ ಕಾವಲೆ' ಅಲ್ಲ ಎಂದು ಸಮಜಾಯಿಷಿ ಕೊಡುತ್ತಾನೆ. ಹಾಗೆ ಒಬ್ಬರಿಗೆ ಮತ್ತೊಬ್ಬರ ಹೆಸರು ಗೊತ್ತಾಗದೆಯೇ ಇಬ್ಬರೂ ದೂರವಾಗುತ್ತಾರೆ. 'ಈ ಸ್ಥಿತಿಯೂ ಒಂದು ಬಗೆಯ ನಿರ್ವಾಣ' ಎಂದು ವ್ಯಂಗ್ಯಪೂರ್ವಕವಾಗಿ ಕಥೆ ಧ್ವನಿಸುತ್ತದೆ.

ಭಾರತೀಯರಾದ ನಮಗೆ ಈ 'ನಿರ್ವಾಣ' ಪದ ಹೊಸದೇನಲ್ಲ. ಪುರಾಣಗಳ ಕಾಲದಲ್ಲಿ ನಿರ್ವಾಣವೆಂದರೆ ಎಲ್ಲದರಿಂದ ಮುಕ್ತನಾಗುವುದು ಎಂದರ್ಥ. ಸನ್ಯಾಸಿಗಳು ನಿರ್ವಾಣ ಹೊಂದಿದರೆ, ಅವರು ಎಲ್ಲರನ್ನು, ಎಲ್ಲವನ್ನು ತ್ಯಜಿಸಿ ಹೋದರೆಂದೇ ಅರ್ಥ. ಇನ್ನೂ ಸರಳವಾಗಿ ಅರ್ಥೈಸುವುದಾದರೆ ಜಾತಿ-ಕುಲ-ನಾಮಧೇಯ-ರೂಪಗಳಿಂದ ಮುಕ್ತನಾಗಿ ಬುದ್ಧನಂತಾಗುವುದು.

ವಸಾಹತುಶಾಹಿ ಆಗಮನ ಮತ್ತು ಅದರ ಪರಿಣಾಮವಾದ ಇಂಗ್ಲೀಷ್ ಶಿಕ್ಷಣ ಇವುಗಳ ಕಾರಣದಿಂದ ಇಡೀ ಭಾರತೀಯ ಸಮಾಜದಲ್ಲಿ ಒಂದು ಬಗೆಯ ಚಲನೆಯುಂಟಾದರೆ, ಕಳೆದ ಶತಮಾನದ ಕೊನೆಯ ದಶಕದಲ್ಲಿ ಭಾರತವು "ಲೈಸೆನ್ಸ್-ಪರ್ಮಿಟ್ ವ್ಯವಸ್ಥೆ"ಗೆ ಮಂಗಳವನ್ನು ಹಾಡಿ, ಖಾಸಗೀಕರಣ, ಮುಕ್ತ ಮಾರುಕಟ್ಟೆ ಇತ್ಯಾದಿಗಳಿಗೆ ತನ್ನನ್ನು ತೆರೆದುಕೊಂಡಿದ್ದರಿಂದ, ಇಡೀ ಸಮಾಜದಲ್ಲಿ ಮತ್ತೊಂದು ಬಗೆಯ ಚಲನೆ ಕಂಡುಬಂದಿತು. ಆ ಚಲನೆಗೆ ಅತ್ಯುತ್ತಮ ಉದಾಹರಣೆ ಈ 'ನಿರ್ವಾಣ' ಎಂಬ ಕಥೆ.

ಇಂದು ಕಾರ್ಪೊರೇಟ್ ಜಗತ್ತು ತನ್ನ ಉದ್ಯೋಗಿಗಳಿಗೆ ವಿಚಿತ್ರವಾದ 'ನಿರ್ವಾಣ'ವನ್ನು ನೀಡುತ್ತದೆ.

ವಿದ್ಯಾವಂತ (ಅಕ್ಷರಸ್ಥ)ನಾದವನು ಯಾವುದೇ ಕಂಪನಿಯ ಉದ್ಯೋಗಿಯಾಗಬಹುದು. ಇಂಗ್ಲೀಷ್ ಭಾಷೆ ಮತ್ತು ಗಣಕಯಂತ್ರದ ಜ್ಞಾನ ಅತ್ಯಾವಶ್ಯಕ. ಇಲ್ಲಾ ಕಾರ್ಪೊರೇಟ್ ಉದ್ಯೋಗಿಗಳು ಒಂದೇ ಬಗೆಯ ಜೀವನಶೈಲಿಯನ್ನು ಅನುಸರಿಸುವುದರಿಂದ, ಹೆಸರುಗಳೂ ಬದಲಾದರೂ ಏನೂ ಅನರ್ಥವಾಗುವುದಿಲ್ಲ.

ಕೆಲಸದ ಒತ್ತಡ, ಇಲ್ಲದ ಪ್ರತಿಭೆಯನ್ನು ತೋರ್ಪಡಿಸಿಕೊಳ್ಳುವ ಉನ್ಮಾದದಲ್ಲಿ ಸುಮಾರು ಉದ್ಯೋಗಿಗಳು ಕೌಟುಂಬಿಕ ಬದುಕೂ ಭಗ್ನವಾಗಿರುತ್ತದೆ. ಪ್ರಪಂಚದ ಬೇರೆ ಬೇರೆ ಕಂಪನಿಗಳ, ಬೇರೆ ಬೇರೆ ವಿಭಾಗಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿ ಕೆಲಸ ಮಾಡುವುದರಿಂದ ಎಲ್ಲರೂ ತಾವು ಹುಟ್ಟಿದ ದೇಶ, ಭಾಷೆ, ಸಂಸ್ಕೃತಿಗಳಾದ, ಹುಟ್ಟಿದ ನೆಲ, ಅದರ ಜಲ, ಸಂವೇದನೆ . . . ಎಲ್ಲವುಗಳನ್ನು ಕಳೆದುಕೊಂಡು ಹಣ ದುಡಿಯುವ ಯಂತ್ರಗಳಾಗಿ ಬಿಟ್ಟಿರುತ್ತಾರೆ.

ಅತೀ ಶ್ರೀಮಂತರು ಹಾಗೂ ನಿರ್ಗತಿಕರು, ಅತ್ಯಾಧುನಿಕ ತಂತ್ರಜ್ಞಾನ ಹಾಗೂ ಮಧ್ಯಕಾಲೀನ ಮತಾಚರಣೆಗಳು, ಅಂತರರಾಷ್ಟ್ರೀಯ ಖ್ಯಾತಿಯ ಉನ್ನತ ಶಿಕ್ಷಣ ಸಂಸ್ಥೆಗಳು ಹಾಗೂ ಏಕೋಪಾಧ್ಯಾಯ ಶಾಲೆಗಳು – ಈ ಬಗೆಯ ಕ್ರೂರ ಸ್ವವಿರೋಧಗಳನ್ನು ಒಳಗೊಂಡ ಇಂದಿನ ಸಾಮಾಜಿಕ ಚಲನೆಯನ್ನು ಹಾಗೂ ಅದರ ಗೊತ್ತು–ಗುರಿಗಳನ್ನು ಹೇಗೆ ಗ್ರಹಿಸಬೇಕು? ಯಾವ ಪರಿಪ್ರೇಕ್ಷ್ಯದಿಂದ? ಇಂತಹ ಪ್ರಶ್ನೆಗಳನ್ನು ಸರಿಯಾದ ರೀತಿಯ ಭಾರತೀಯ ಅರ್ಥಮಾಡಿಕೊಂಡು, ಸರ್ವರಿಗೂ ಒಳಿತನ್ನು ಬಯಸುವ ಹಾದಿಯನ್ನು ಹುಡುಕಬೇಕಾಗಿದೆ.

ಚಲನಶೀಲವಾಗಿದ್ದ ಗ್ರಾಮ ಸಮುದಾಯಗಳು ಇಂದು ನರಸತ್ತ ಮನುಷ್ಯರಂತಾಗಿವೆ. ಹೊಸ ವಸ್ತು, ವಿವರಗಳು ಭಾರತೀಯ ನಗರಗಳನ್ನು ಪ್ರವೇಶಿಸುತ್ತಿದ್ದಂತೆ, ಭಾರತೀಯರ ಆಲೋಚನಾ ಕ್ರಮಗಳು, ಆದ್ಯತೆ–ಆಶೋತ್ತರಗಳೂ ನಿಧಾನವಾಗಿ ಬದಲಾಗುತ್ತ . . . ಈಗ ವಿಚಿತ್ರ ತಳಮಳ, ತಲ್ಲಣ, ಸಂಘರ್ಷಗಳು ಕಾಣಿಸಿಕೊಳ್ಳತೊಡಗಿವೆ.

‘ಹುಲಿ ಸವಾರಿ’ ಕಥಾಸಂಕಲನದ ಮತ್ತೊಂದು ಹೃದಯಸ್ಪರ್ಶಿ ಕಥೆ ‘ನೂಲಿನವಾಣಿ’.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ಕಮಟಿಗೆ ಬಂದಾಗ, ಪುಣೆಯಲ್ಲಿ ಓದುತ್ತಿದ್ದ ಪಾಟೀಲರು ಓದು ಬಿಟ್ಟು ಚಳುವಳಿಯಲ್ಲಿ ತೊಡಗಿಸಿಕೊಂಡರು. ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಪಾಟೀಲರು ತಮ್ಮ ಊರಿಗೆ ಹಿಂತಿರುಗಿ ಗ್ರಾಮೋದ್ಯೋಗ ಪ್ರಚಾರಕ್ಕೆ ತೊಡಗುತ್ತಾರೆ. ಕುಮಟಾದಲ್ಲಿ ಪರಿಚಯವಾದ ನೀಲಕಂಠನ ಮನೆಯಲ್ಲಿ ಪಾಟೀಲರು ಉಳಿದುಕೊಳ್ಳುತ್ತಾರೆ.

ಬಹಳಷ್ಟು ಕಾಲ ಅವನ ಮನೆಯಲ್ಲಿ ಉಳಿದುಕೊಳ್ಳುತ್ತಾರೆ. ಅವರಿಂದ ನೀಲಕಂಠನಿಗೆ ಬಹಳ ಸಹಾಯವೂ ಆಗುತ್ತದೆ. ನೀಲಕಂಠನ ಮದುವೆಯಾದ ಮೇಲೆ ಅವನ ಹೆಂಡತಿ ಕಾವೇರಿಗೂ ಸಹ ಪಾಟೀಲರು ತಮಗೆ ಬರುತ್ತಿದ್ದ ಸ್ವಾತಂತ್ರ್ಯ ಯೋಧರ ನಿವೃತ್ತಿವೇತನದ ಅರ್ಧವನ್ನು ಕೊಡುತ್ತಿದ್ದರು. ಅವರ ಸ್ವಂತದ ಖರ್ಚುಗಳು ಬಹಳ

ಕಡಿಮೆ ಇದ್ದವು. ಊರಲ್ಲಿ ಏನೇನೋ ಕೆಲಸಗಳನ್ನು ಹಚ್ಚಿಕೊಂಡು, ತೊಡಗಿಸಿಕೊಂಡು ಅದನ್ನೇ ಇಷ್ಟಪಡತೊಡಗುತ್ತಾರೆ. ಶನಿವಾರ ಅರ್ಧ ದಿನದ ಶಾಲೆ ಮುಗಿದ ನಂತರ ಮಕ್ಕಳಿಗೆ ರಾಮಾಯಣ, ಮಹಾಭಾರತ, ಸ್ವಾತಂತ್ರ್ಯ ಯೋಧರ ಕಥೆಗಳನ್ನು ಹೇಳುತ್ತಿದ್ದರು. ಚರಕದಿಂದ, ತಕಲಿಯಿಂದ ನೂಲು ತೆಗೆಯಲು ಕಲಿಸುತ್ತಿದ್ದರು. ಮಕ್ಕಳೂ ತೆಗೆದ ನೂಲಿನಿಂದ ಹಾರ ಮಾಡಿ ಶಾಲೆಯಲ್ಲಿದ್ದ ಗಾಂಧೀಜಿ ಭಾವಚಿತ್ರಕ್ಕೆ ಹಾಕುತ್ತಿದ್ದರು.

ಮೊದಮೊದಲು ನೀಲಕಂಠಯ್ಯ, ಪಾಟೀಲರ ಜೊತೆ ಸೇರಿ ಆದಷ್ಟು ಸಹಾಯ ಮಾಡುತ್ತಿದ್ದ. ತದನಂತರದಲ್ಲಿ ಆ ಚಿತ್ರಣ ಬದಲಾಯಿತು. ಪಾಟೀಲರ ಸತತ ಭೇಟಿಗಳಿಂದ ಚರಕ ಖಾದಿಗ್ರಾಮೋದ್ಯೋಗ, ದೇಶಭಕ್ತಿಗಳಿಂದ ಬೇಸತ್ತ ಕೆಲವರು ನೀಲಕಂಠನನ್ನು ಕರೆದು, 'ಇದೇನು ಪೀಡೆ ಊರಿಗೆ ತಂದೆಯೋ?' ಎಂದು ಬೈದರು. ನೀಲಕಂಠ ಯಾರ ಪರ ವಹಿಸಬೇಕೋ ತಿಳಿಯದೇ ಇಬ್ಬರನ್ನೂ ಸಮರ್ಥಿಸುವ ಮಾತಾಡಿದ. ಯಾಕೆ ತನಗೆ ಪಾಟೀಲರ ಪರ ವಹಿಸಿ ಮಾತಾಡುವುದು ಶಕ್ಯವಾಗಲಿಲ್ಲವೆಂದು ತಿಳಿಯದೇ ಹೋಯಿತು. ಹಳ್ಳಿಯ ಹುಡುಗರು 'ದೇಶಕ್ಕೆ ನಾತಾ ಖಾದಿ ಮಾಮಾ' ಎಂದೆಲ್ಲಾ ಚುಡಾಯಿಸುತ್ತಾ ಪಾಟೀಲರನ್ನು ಆಡಿಕೊಂಡು, ಓಡಾಡುತ್ತಿದ್ದರು.

ಪಾಟೀಲರಿಗೆ ಮತ್ತೊಬ್ಬ ವ್ಯಕ್ತಿಯ ಪರಿಚಯವಾಗುತ್ತದೆ. ಅವನು– ವಿಶ್ವನಾಥ. ಅವನ ಕುಟುಂಬದ ಬಗ್ಗೆಯೂ ಪಾಟೀಲರಿಗೆ ಪ್ರೀತಿ–ಗೌರವ ಬೆಳೆಯುತ್ತದೆ. ವಿಶ್ವನಾಥನಿಗೆ ಪಾಟೀಲರ ಬಗ್ಗೆ ಗೌರವ, ಪ್ರೀತಿ, ವಿಶ್ವಾಸ. ಆದರೆ ವಿಶ್ವನಾಥನ ಮಕ್ಕಳಿಗೆ ಪಾಟೀಲರೆಂದರೆ ಅಷ್ಟಕ್ಕಷ್ಟೆ. ಪಾಟೀಲರ 'ಚರಕ ಅಭಿಯಾನ'ದಲ್ಲಿ ವಿಶ್ವನಾಥನಿಗೆ ಅಪಾರವಾದ ಆಸಕ್ತಿ.

ಊರಿನ ರೇಷನ್ ಅಂಗಡಿಯಲ್ಲಿ ಅವ್ಯವಹಾರವಾಗಿದೆಯೆಂದು ತಿಳಿದು, ನೊಂದ ಪಾಟೀಲರು ಅಂಗಡಿ ಮುಖ್ಯಸ್ಥ ರಾಜಾರಾಮ ಕಿಣಿಯನ್ನು ಭೇಟಿ ಮಾಡುತ್ತಾರೆ. ಪಾಟೀಲರ ಮಾತನ್ನು ಐದು ನಿಮಿಷ ಕೇಳಿಸಿಕೊಂಡ ರಾಜರಾಮ ಕಿಣಿ ಮುಂದೆ ಮಾತಾಡಲು ಅವಕಾಶ ಕೊಡದೆ "ಚರಕ, ಖಾದಿ ಅಂತ ಓಡಾಡಿಕೊಂಡಿದ್ದೀರಿ ಅಂತ ಸುಮ್ಮನೇ ಇದ್ದರೆ, ನಮಗೇ ಪ್ರಾಮಾಣಿಕತೆಯ ಬಗ್ಗೆ ಹೇಳಿಕೊಡಲು ಬಂದಿರಲ್ಲ. ದೇಶ ಆಳುವ ನಿಮ್ಮ ದೇಶಭಕ್ತ ಸೂಳೆ ಮಕ್ಕಳು ಮಾಡುವುದು ನಮಗೆ ಗೊತ್ತಿಲ್ಲವೋ? ಮೊದಲು ಅವರನ್ನು ಸರಿ ಮಾಡಿ . . . ಆಮೇಲೆ ನಮ್ಮ ವ್ಯವಹಾರದಲ್ಲಿ ಕೈಹಾಕುವಿರಂತೆ' ಅನ್ನುತ್ತ ಅವಮಾನ ಮಾಡುತ್ತಾನೆ.

ಮತ್ತೊಬ್ಬರಂತೂ 'ಕಾಲಕ್ಕೆ ತಕ್ಕ ಹಾಗೆ ಆದರ್ಶಗಳನ್ನು ಬದಲಿಸಿಕೊಳ್ಳಬೇಕು ಪಾಟೀಲರೇ" ಎಂದು ಉಪದೇಶ ಕೂಡ ಕೊಟ್ಟರು. ಯಾರಿಗಾದರೂ ಏನಾದರೂ ಹೇಳಹೋದರೆ ಸಾಕು, 'ಖಾದಿ ಹಾಕಿಕೊಂಡ ನಿಮ್ಮ ನಾಯಕರನ್ನು ಮೊದಲು ಸರಿ ಮಾಡಿ' ಅಂತ ಅನ್ನುವವರೆಗೂ ಹೋದರು. ತನ್ನನ್ನು ಅವರ ಪ್ರತಿನಿಧಿಯೆಂದು ಇವರೆಲ್ಲ ಯಾಕೆ ವಿನಾಕಾರಣ ತಿಳಿದುಕೊಂಡಿದ್ದಾರೆಂದು ಪಾಟೀಲರಿಗೆ ಅರ್ಥವಾಗುತ್ತಿರಲಿಲ್ಲ.

ಹಳ್ಳಿಯ ಯುವಕರು, ತಂದೆ-ತಾಯಿಗಳ ಮಾತನ್ನು ಧಿಕ್ಕರಿಸಿ ನಗರಗಳಿಗೆ ಲಗ್ಗೆ ಇಟ್ಟು, ಲಂಚ ನೀಡಿ, ಬೇರೆ ಬೇರೆ ಮಾರ್ಗಗಳಿಂದ ದುಡಿದು ಹಳ್ಳಿಗೆ ಹಣ ಕಳುಹಿಸಲಾರಂಭಿಸಿದರು. ಹಳ್ಳಿಯ ಮಕ್ಕಳಿಗೆ ಚರಕ, ನೂಲು ಯಾವುದೂ ಬೇಡವಾಯಿತು. ಕೆಲವು ಹಾದಿ ತಪ್ಪಿದ ಮಕ್ಕಳ ಕಂಡು . . . ಅವರನ್ನು ತಿದ್ದಲು ಪ್ರಯತ್ನಿಸಿ . . ಅವರ ತಂದೆ-ತಾಯಿಗಳಿಂದಲೇ ತಾತ್ಸಾರಕ್ಕೆ ಒಳಗಾಗುತ್ತಾರೆ. ಮೊದಲಿನ ಹಾಗೆ ಅವರನ್ನು ಕ್ರಾಫ್ಟ್ ಪಿರಿಯಡ್‌ನಲ್ಲಿ ಶಾಲೆಯೊಳಗಡೆ ಬಿಡುವುದನ್ನು ನಿಲ್ಲಿಸಲಾಗುತ್ತದೆ. ಚರಕ, ತಕಲಿ ನೂಲು ಹಗುರವಾಗಿ ಆಡಿಕೊಳ್ಳುತ್ತಿದ್ದರು. 'ಖಾದಿ ಬಡತನಕ್ಕೆ ಹಾದಿ' ಎಂದು ಹಾಸ್ಯಾಸ್ಪದವಾಗಿ ನಗುತ್ತಿದ್ದರು. ನೂಲಿನ ಪಾವಿತ್ರ್ಯ ನಾಶವಾಯಿತೆಂದು ಬೇಸರ ಪಡುತ್ತಾರೆ.

ಇದೆಲ್ಲದರ ಮಧ್ಯೆ ಆತ್ಮೀಯ ವಿಶ್ವನಾಥ ತೀರಿಕೊಂಡ ಸುದ್ದಿ ಬರಸಿಡಿಲಿನಂತೆ ಎರಗುತ್ತದೆ. ವಿಶ್ವನಾಥ ಮಂಚದ ಮೇಲೆ ಮಲಗಿದ್ದಲ್ಲೇ ತೀರಿಕೊಂಡಿದ್ದ. ಅವನ ಕೈಗೆ, ಕಾಲಿಗೆ, ದಾರಗಳು ತಂತಿಗಳು ಸುತ್ತಿಕೊಂಡಿದ್ದವು. ಕೆಲವು ತುಂಡಾಗಿ ಬಿದ್ದಿದ್ದವು. ಜಂತಿಯ ಯಾವುದೇ ರಾಟಿಯಿಂದ, ಯಾವುದೋ ಸಂದಿಯಿಂದ ಇಳಿಬಿದ್ದ ಕೆಲವು ದಾರಗಳು ಕೈಕಾಲಿಗೆ ಸುತ್ತಿಕೊಂಡು ಅವನ ದೇಹ ಕಟಪುತಳಿಯ ಹಾಗೆ ತೋರುವಂತೆ ಮಾಡಿದ್ದವು.

'ತನ್ನ ಸಾವಿನಲ್ಲವನು, ತಾನು ಹಿಡಿದ ಹಾದಿಯ ದುರಂತದ ಪ್ರತಿಮೆಯನ್ನು ಹಿಂದೆ ಬಿಟ್ಟು ಹೋದ ಹಾಗೆ ಅನಿಸುತ್ತಿತ್ತು. ಡೆಲ್ಲಿಯಿಂದ ಮಗನನ್ನು ಕರೆಸಿದರು. ಅವನು ಬಂದು ಬೆಂಕಿ ಇಕ್ಕುವ ಹೊತ್ತಿಗೆ ಹೆಣದ ವಾಸನೆ ಹಬ್ಬತೊಡಗಿತ್ತು"

– ನೂಲಿನ ವಾಣಿ ಪುಟಸಂಖ್ಯೆ – 86

ಪಾಟೀಲರು ಊರು ಬಿಟ್ಟು ಬೇರೆ ಕಡೆಗೆ ಸಾಗುತ್ತಿರುತ್ತಾರೆ. ಯಾವುದೋ ಅಣೆಕಟ್ಟು ವಿರೋಧ ಮೆರವಣಿ. 'ಇಂತಹ ಪ್ರಗತಿ ವಿಶ್ವಕ್ಕೆ ದುರ್ಗತಿ' ಎಂದು ಸಾರುವ ಪತಾಕೆಗಳು. ಪ್ರಕೃತಿಯನ್ನು ಉಳಿಸಲು ಕಳಕಳಿಯ ಕರೆ, ಪಾಟೀಲರಿಗೆ ಬಹಳ ಸಂತೋಷವಾಗುತ್ತದೆ. ಮೆರವಣಿಗೆಯಲ್ಲಿದ್ದವರೆಲ್ಲಾ ಯುವಕರು. ನಮ್ಮ ಚೇತನವಿನ್ನೂ ಬತ್ತಿಹೋಗಿಲ್ಲ ಅನಿಸಿತು ಪಾಟೀಲರಿಗೆ. ತಾನೂ ಹೋಗಿ ಅದರಲ್ಲಿ ಸೇರುವ ಅನಿಸುವಷ್ಟು

ಖುಷಿಯಾಯಿತು. ಅಷ್ಟರಲ್ಲಿ ಒಂದು ಮದುವೆ ಚಪ್ಪರದಿಂದ ಮೈಕಿನಲ್ಲಿ ದೊಡ್ಡದಾಗಿ ಜನಪ್ರಿಯ ಚಿತ್ರಗೀತೆ ಕೇಳಿಬರುತ್ತದೆ. ಮೆರವಣಿಗೆಯಲ್ಲಿದ್ದ ಒಂದಿಬ್ಬರು, ಇನ್ನಿಬ್ಬರು, ಮತ್ತಿಬ್ಬರು, ನಾಲ್ಕಾರು ಎಲ್ಲರೂ ವಿಚಿತ್ರ ಮತ್ತಿನಲ್ಲಿ ಮೈ ಔಕಿಸಿ ಕುಣಿಯತೊಡಗುತ್ತಾರೆ. ಮೆರವಣಿಗೆಯ ಘೋಷಣೆಗಳಿಗೂ ಅವರು ನಡೆಸುತ್ತಿದ್ದ ನೃತ್ಯಕ್ಕೂ ತಾಳ–ಮೇಳವೇ ಇರಲಿಲ್ಲ. ಈ ಭೂತನೃತ್ಯದ ಅಸಂಗತತೆಯನ್ನು ಗ್ರಹಿಸಲಾರದೇ ಪಾಟೀಲರು ತಬ್ಬಿಬ್ಬಾದರು.

ಔದ್ಯೋಗಿಕರಣ, ಜಾಗತೀಕರಣದ ಪ್ರಭಾವದ ಪರಿಣಮ, ತಂದೆ–ಮಕ್ಕಳ ಸಂಬಂಧದ ಬಿರುಕುಗಳು, ಮೌಲ್ಯಗಳು, ಕ್ಷೀಣಿಸುವುದು, ಭಾವನೆಗಳ ನಿರ್ಲಿಪ್ತತೆ, ಹಣದ ದುರಾಸೆ, ದೇಶ ಕಟ್ಟಿದವರ ಬಗೆಗಿನ ಉಡಾಫೆ ಮಾತುಗಳು, ಪರಂಪರಾಗತ ಜೀವನ ಕ್ರಮದೊಳಗಿನ ಆತಂಕ, ಹಿರಿಯರ ನಿರ್ಲಕ್ಷ್ಯ, ಸ್ಥಳೀಯವಾದದ್ದೆಲ್ಲ, ಸ್ಥಳೀಯರಿಗೆ ಬೇಡವಾಗಿ, ಗ್ರಾಹಕ ಬಳಕೆಯ ಕೊಳ್ಳುಬಾಕ ಸಂಸ್ಕೃತಿಯಲ್ಲಿ ಮನರಂಜನೆಯ, ಮಾರಾಟದ ಸರಕಾಗಿ ಪರಿವರ್ತಿತವಾಗುತ್ತಿರುವ ಜಾಗತೀಕರಣದ ಈ ಸಂದರ್ಭಕ್ಕೆ 'ಹುಲಿಸವಾರಿ' ಕಥಾ ಸಂಕಲನ ಒಂದು ಪ್ರಭಾವಶಾಲಿ ರೂಪಕವಾಗಿದೆ.

ದೇಸೀತನವನ್ನು ಉಳಿಸಿಕೊಂಡು ಜಾಗತೀಕರಣದ ಸವಾಲುಗಳನ್ನು ಸಮರ್ಥವಾಗಿ ಎದುರಿಸಬೇಕೆಂಬುದು ವಿವೇಕ ಶಾನಭಾಗರ ಒಳನೋಟವಾಗಿದೆ.

## ಅಧ್ಯಾಯ- 6 : ವಿವೇಕ ಶಾನಭಾಗರ ಕಥೆಗಳಲ್ಲಿ ಮನುಷ್ಯ ಸಂಬಂಧಗಳ ಸಂಕೀರ್ಣತೆ ಮತ್ತು ಸಾಮಾಜಿಕ ಕಳಕಳಿ

ಮನುಷ್ಯ ತನ್ನ ನಿಜವಾದ ಸಂತೋಷ, ಸುಖ, ಸ್ವಾತಂತ್ರ್ಯ, ನೆಮ್ಮದಿಗಳನ್ನು ಮುಕ್ತವಾಗಿ ಅನುಭವಿಸಲು ಸಾಧ್ಯವೇ?

ವಿವೇಕರ ಮೊದಲ ಕಥಾ ಸಂಕಲನ "ಅಂಕುರ"ದಲ್ಲಿ ಮನುಷ್ಯ ಸಂಬಂಧಗಳು ಯಾವ ರೀತಿ ಕೌಟುಂಬಿಕ ಮೌಲ್ಯವನ್ನು ಕಾಪಾಡುವಲ್ಲಿ ಅಥವಾ ನಾಶಗೊಳಿಸುವಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆಯೆಂಬುದನ್ನು ಬಹಳ ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ.

'ಅಂಕುರ' ಕಥಾಸಂಕಲನದಲ್ಲಿನ 'ಪರಸ್ಪರ', 'ಅಂಕುರ', 'ಮಾಧುರಿ', 'ಬಂದಾವೋ ಬಾರವೋ' ಮತ್ತು ಪರಸ್ಪರ ಈ ಕಥೆಗಳು ಮನುಷ್ಯ ಸಂಬಂಧಗಳ ಸಂಕೀರ್ಣತೆಯ ಎಳೆಗಳನ್ನು ನಿಧಾನವಾಗಿ ಬಿಡಿಸಲು ಪ್ರಯತ್ನಿಸುತ್ತವೆ. ತನಗಿಂತ ವಯಸ್ಸಿನಲ್ಲಿ ದೊಡ್ಡವಳಾದ ಪ್ರೇಮ್ಮಕ್ಕನ ಬಗ್ಗೆ ನಿರೂಪಕನಿಗಿರುವ ಅಸ್ಪಷ್ಟ ಕಾಮನೆಗಳು, ಅವನಲ್ಲಿ ಸದಾ ಗೊಂದಲವನ್ನು ಸೃಷ್ಟಿಸುತ್ತಿರುತ್ತವೆ.

ಮಾನವ ಸಮಾಜದಲ್ಲಿ ವ್ಯಕ್ತಿಯೊಬ್ಬ ತನ್ನ ಸುತ್ತ ಕಟ್ಟಿಕೊಳ್ಳುವ ಕೆಲವು ಗೋಜಲು ಗೋಜಲಾದ ಸಂಬಂಧಗಳು, ಕುಟುಂಬದವರೊಡನೆ ಬಾಂಧವ್ಯ, ಗೆಳೆಯರು, ಪರಿಚಿತರು-ಅಪರಿಚಿತರು, ಮುಂತಾದವರೊಡನೆ (ಬೇಕಾಗಿಯೋ ಅಥವಾ ಬೇಡವಾಗಿಯೋ) ಒಡನಾಟ, ಇವೆಲ್ಲಾ ಒಂದು ಹಂತದವರೆಗೆ ಸರಿ ಎನ್ನಿಸಿದರೂ . . . ಕೆಲವು ಸಂದರ್ಭಗಳಲ್ಲಿ . . . ಯಾವುದೂ ಇಲ್ಲಿ ಶಾಶ್ವತವಲ್ಲ . . . ಎಂಬ ಅಂಶವನ್ನು ಸ್ಪಷ್ಟಪಡಿಸಿದರೂ, ಅವುಗಳಿಂದ ಬಿಡಿಸಿಕೊಳ್ಳಲಾರದೆ . . . ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾ ಸುಮ್ಮನೆ ಇರಬೇಕಾಗುತ್ತದೆ.

ವಿವೇಕ ಶಾನಭಾಗರ ಕಥೆಗಳಲ್ಲಿ ಮನುಷ್ಯ ಸಂಬಂಧಗಳು ಮೇಲ್ನೋಟಕ್ಕೆ ಸರಳವೆನಿಸಿದರೂ. . . ಆಳದಲ್ಲಿ ಸಂಕೀರ್ಣವಾಗಿವೆ. ಆದರೂ ಈ ಸಂಕೀರ್ಣತೆಯಿಂದ ಮನುಷ್ಯನ ಸಾಮಾಜಿಕ ಸ್ವಾಸ್ಥ್ಯ ಹಾಳಾಗಬಾರದೆಂಬ ಸಾಮಾಜಿಕ ಜವಾಬ್ದಾರಿ ಅವರಿಗಿದೆ.

'ಮತ್ತೊಬ್ಬರ ಸಂಸಾರ' ಕಥಾಸಂಕಲನದ ಒಂದು ಕಥೆ 'ಶರವಣ ಸರ್ವೀಸಸ್', ಶ್ರವಣ-ಶರವಣನ ಮೂಲ ಹೆಸರು. ಶ್ರೀರಂಗಪಟ್ಟಣದವ, ಕೆಲಸದ ಮೇಲೆ ಬೆಂಗಳೂರಿಗೆ ಬರುತ್ತಾನೆ. ಷೇರು ಹಗರಣದಿಂದ ಅವನ ಕೆಲಸ ಬಿದ್ದುಹೋಗುತ್ತದೆ. ನಂತರ ರಿಯಲ್ ಎಸ್ಟೇಟ್ ಆರಂಭಿಸಿ. . . "ಶರವಣ ಸರ್ವೀಸಸ್" ಆರಂಭಿಸುತ್ತಾನೆ.

ಕಥಾನಯಕನಿಗೆ ಸೈಟ್ ನೋಡಬೇಕಾಗಿರುತ್ತದೆ. ಶರವಣ ಬಹಳ ಸಂಪ್ರದಾಯವಾದಿ. ಮಂಗಳವಾರ ಹೋಗುವುದು ಬೇಡ ಎನ್ನುತ್ತಾನೆ. ಶರವಣ . . . ಸೆಕೆಂಡ್ ಹ್ಯಾಂಡ್ ಫ್ರಿಡ್ಜ್ ಬೇಕೇ, ಹಳೆಯ ಫ್ಯಾನ್ ಮಾರಬೇಕೇ, ಕಡಿಮೆ ಕರ್ಚಿನಲ್ಲಿ ಕಾರಿನ ಜಜ್ಜಿದ ಹಿಂಭಾಗ ಸರಿಪಡಿಸಬೇಕೇ, ಸೈಟ್ ಬೇಕೇ, ಮನೆ ಕಟ್ಟಲು ಕಂಟ್ರಾಕ್ಟರ್ ಬೇಕಾದರೆ ನಾಡಿ ಶಾಸ್ತ್ರದ ಪಂಡಿತರನ್ನು ಗುರುತು ಮಾಡಿಸಬೇಕೇ . . . ಏನೇ ಸಹಾಯ ಬೇಕಾದರೂ ಮಾಡುತ್ತಾನೆ.

ಸೈಟ್ ತೋರಿಸಲು ಕಥಾನಾಯಕನನ್ನು ಕರೆದುಕೊಂಡು ಶರವಣ ರಸ್ತೆಯಲ್ಲಿ ಹೋಗುತ್ತಿರುತ್ತಾನೆ. ರಭಸದಿಂದ ರಸ್ತೆಯಲ್ಲಿ ಹೋಗುತ್ತಿದ್ದ ಬಸ್ಸೊಂದು ನಿಯಂತ್ರಣ ತಪ್ಪಿ ಇವರತ್ತ ನುಗ್ಗುತ್ತದೆ. ಶರವಣನಿಗೆ ಇದು ತಿಳಿಯುವುದಿಲ್ಲ. ಕಥಾನಾಯಕ ಶರವಣನ ಕೈಯನ್ನು ಜೋರಾಗಿ ಪಕ್ಕಕ್ಕೆ ಹಿಡಿದೆಳೆಯುತ್ತಾನೆ. ಶರವಣನಿಗೆ ಅಂದಿನಿಂದ ಕಥಾನಾಯಕ ದೇವರಂತೆ ಕಾಣತೊಡಗುತ್ತಾನೆ.

'ಲಾವಣ್ಯ' ಎಂಬ ಯುವತಿಯೊಂದಿಗೆ ಶರವಣನ ಮದುವೆಯಾಗಿರುತ್ತದೆ. ಲಾವಣ್ಯ ಅನುಕೂಲಸ್ಥರ ಮನೆಯ ಯುವತಿಯೇನೂ ಅಲ್ಲ. ಆದರೂ ಮದುವೆಯಾಗುವಾಗಲೇ ಊರು (ಶ್ರೀರಂಗಪಟ್ಟಣ) ಸಣ್ಣದುಅಂತ ಮುಖ ಚಿಕ್ಕದು ಮಾಡಿದ್ದಳಂತೆ. ಹಿರಿಯರು ಬುದ್ಧಿ ಹೇಳಿ ಮದುವೆ ಮಾಡಿದ್ದರು. ಮದುವೆಯ ದಿನ ಬಿಕ್ಕಿ ಬಿಕ್ಕಿ ಅತ್ತಾಗ ತಾಯಿ ಮನೆ ತೊರೆಯುವ ದುಃಖವೇನೋ ಎಂದು ಶರವಣ ಯೋಚಿಸಿರುತ್ತಾನೆ. ಆದರೆ, ಅದರಲ್ಲಿ ಈ ಸಂಕಟವೂ ಇತ್ತೋ ಏನೋ ಎಂದು ಶರವಣ ಮನಸ್ಸಿನಲ್ಲಿ ಬೇಸರಗೊಳ್ಳುತ್ತಾನೆ.

ಮನೆಗೆ ಬಂದ ಮೇಲೆ ಎಲ್ಲದರಲ್ಲೂ ಹೆಚ್ಚೇ ಎನ್ನುವಂತಹ ವರ್ತನೆ. 'ಅವಳು ನಮ್ಮೂರಿನ ಸಿನೆಮಾ ಥಿಯೇಟರನ್ನು ಬೈದರೂ ನಮ್ಮನ್ನೇ ಆಡಿಕೊಂಡಂತೆನಿಸಿ ಕೆರಳುತ್ತಿದ್ದೆ' – ಶರವಣ ಪುಟಸಂಖ್ಯೆ 24.

ಶರವಣ ಜೀವನವಿಡೀ ದುಡಿದರೂ ನೌಕರಿಯಲ್ಲಿ, ಅಂತಸ್ತಿನಲ್ಲಿ ಏನೂ ಬದಲಾವಣೆ ಆಗುವುದಿಲ್ಲ ಎಂಬುದನ್ನು ಅರಿತು ಮನಸ್ಸಿನಲ್ಲಿಯೇ ಕೊರಗುತ್ತಿದ್ದಳು. ಒಂದುದಿನ ಚಿಕ್ಕಪ್ಪನ ಮಗ ಶ್ರೀಕಾಂತ ಮನೆಗೆ ಬರುತ್ತಾನೆ. ಷೇರು ವ್ಯವಹಾರದ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾನೆ. ಶರವಣನ ಹೆಂಡತಿ ಅತ್ಯಂತ ಆಸ್ಥೆಯಿಂದ ಅವನ ಮಾತುಗಳನ್ನು ಕೇಳುತ್ತಾಳೆ. ಆಕೆಯ ಈ ವರ್ತನೆ ಶರವಣನ ಜೀವಕ್ಕೆ ಏನೋ ಸಂದೇಶವನ್ನು ರವಾನಿಸಿದಂತೆ ತೋರುತ್ತದೆ. ಶರವಣ ತಂದೆ, ಶ್ರೀಕಾಂತನ ಉಪನ್ಯಾಸ ಮುಗಿದ ಮೇಲೆ 'ದುಡಿಮೆಯೇ ಇಲ್ಲದೇ ಬರೀ ಕಾಗದದ ಮೇಲೆ ವೃದ್ಧಿಸುವ ಸಂಪತ್ತಿನ ವಿಷಯದಲ್ಲಿ ಹುಷಾರಾಗಿರಪ್ಪ' ಎನ್ನುವುದು ಅತ್ಯಂತ ಮಾರ್ಮಿಕ ಹಾಗೂ ವಾಸ್ತವವಾಗಿದೆ.

ಅಷ್ಟೇನೂ ಅನುಕೂಲವಿಲ್ಲದ ಮನೆಯಿಂದ ಬಂದ ಲಾವಣ್ಯ ಶರವಣರ ಜೊತೆಯಲ್ಲಿ ಸುಖ-ಸಂತೋಷದಿಂದ ಜೀವನವನ್ನು ಮಾಡಬಹುದಾಗಿತ್ತು. ಆದರೆ, ಹಾಗಾಗುವುದಿಲ್ಲ. 'ಮದುವೆ' ಎಂಬ ಸಾಮಾಜಿಕ ಪದ್ಧತಿ, ಪ್ರೀತಿ, ವಿಶ್ವಾಸ, ಕಾಳಜಿ, ಪರಸ್ಪರ ಅರ್ಥ ಮಾಡಿಕೊಳ್ಳುವಿಕೆ . . . ಇವೆಲ್ಲಾ ಆಗದೇ ಇನ್ನೇನೋ . . . (ಇಲ್ಲದೇ ಇರುವುದನ್ನು) ನಿರೀಕ್ಷಿಸುತ್ತ ಮನೆಯವರ ಶಾಂತಿ, ನೆಮ್ಮದಿ ಕದಡುವುದನ್ನು ಕಥೆಗಾರ ಅತ್ಯಂತ ವಿಷಾದದಿಂದ ದಾಖಲಿಸುತ್ತಾನೆ.

ಹೆಂಡತಿಯ ಅಸಮಾಧಾನವನ್ನು ಅರ್ಥಮಾಡಿಕೊಂಡ ಶರವಣ ಬೆಂಗಳೂರಿಗೆ ಬರುತ್ತಾನೆ. ಆದರೆ, ಬಂದ ಎರಡು ತಿಂಗಳಿಗೆ ಮೊದಲ ಕೆಲಸ ಹೊರಟು ಹೋಗುತ್ತದೆ. ಆ ನಂತರದ ಆರು ತಿಂಗಳು ಶರವಣ ಬಹಳ ಕಷ್ಟ ಪಡುತ್ತಾನೆ. ನಿಧಾನವಾಗಿ ಸುತ್ತಮುತ್ತಲ ಜನಜಂಗುಳಿಯ ಅಗತ್ಯಗಳನ್ನು ಅರ್ಥಮಾಡಿಕೊಂಡು "ಶರವಣ ಸರ್ವೀಸಸ್" ಆರಂಭಿಸುತ್ತಾನೆ. ಬೇರೆ ಬೇರೆ ಊರುಗಳಿಂದ ಬೆಂಗಳೂರಿಗೆ ಬರುವ ಭಿನ್ನಪ್ರಕಾರದ ವ್ಯಕ್ತಿಗಳಿಗೆ ಅವರನ್ನು ತೃಪ್ತಿಪಡಿಸುವಂತಹ ಕೆಲಸ ಮಾಡುತ್ತ ಎಲ್ಲರ ಪ್ರೀತಿಗೆ ಪಾತ್ರನಾಗುತ್ತಾನೆ.

ಕಥೆಗಾರರ ದೃಷ್ಟಿಕೋನ ಇಲ್ಲಿ ಬಹಳ ಅಪ್ಯಾಯಮಾನವಾಗಿದೆ. ಎಲ್ಲರೂ ಎಲ್ಲಾ ಕೆಲಸವನ್ನು ಮಾಡಲಾಗದು. ಅದರಲ್ಲೂ ವಿಶೇಷವಾಗಿ ಸಣ್ಣ-ಪುಟ್ಟ ಕೆಲಸಗಳನ್ನು ಮಾಡಲು, ಅದರಲ್ಲೂ ಬೇರೆಯವರ ಕೆಲಸ ಮಾಡಲು ಎಲ್ಲರೂ ಸಿದ್ಧರಿರುವುದಿಲ್ಲ.

ಪತ್ನಿ ಲಾವಣ್ಯ ಜ್ವರದಿಂದ ನರಳುತ್ತಿದ್ದಾಗ ಶರವಣ ಏನೂ ಆಗೇ ಇಲ್ಲವೆಂಬಂತೆ ಆಫೀಸಿಗೆ ಹೋಗಿ ಬರುತ್ತಾನೆ. ಅವನು ಮನೆಗೆ ಬರುವಷ್ಟರಲ್ಲಿ ಹೆಂಡತಿ ಮನೆ ಬಿಟ್ಟು ಹೋಗಿರುತ್ತಾಳೆ. ಮಗಳನ್ನು ಬಿಟ್ಟುಹೋಗುವಾಗ ಅವಳಿಗೆ ಏನೂ ಅನಿಸದೇ ಹೋಯಿತೇ ಎಂದು ಶರವಣನಿಗೆ ಆಶ್ಚರ್ಯ ಮತ್ತು ನೋವಾಗುತ್ತದೆ.

ಶರವಣನ ಮನೆಗೆ ಹೋಗಿದ್ದಾಗ ಅವನ ವಯಸ್ಸಾದ ತಾಯಿ 'ಆ ರಂಡೆಯನ್ನು ಮರೆತು ಇನ್ನೊಂದು ಮದುವೆಯಾಗಲು ಹೇಳಿ, ನಡುವೆ ನಿಂತು ಎಲ್ಲರಿಗೂ ನೂರು ಕೆಲಸ ಮಾಡಿಕೊಡುತ್ತಾ ಇವನಿಗೆ ಮಾಡುವವರು ಯಾರೂ ಇಲ್ಲ' . . ಎಂದು ನಿರೂಪಕನ ಕೈಹಿಡಿದು ಹೇಳಿದಾಗ . . . ನಿರೂಪಕನಿಗೆ ಬೇಸರವಾಗುತ್ತದೆ. ತನ್ನ ವೈಯಕ್ತಿಕ ನೋವನ್ನು ಮರೆತು, ಇತರರ ನೋವಿನಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಶರವಣನ ವ್ಯಕ್ತಿತ್ವ ನಿರೂಪಕನನ್ನು ಅಚ್ಚರಿಗೊಳಿಸುತ್ತದೆ.

ದುಡ್ಡು ಹೆಚ್ಚು ಇಲ್ಲದಿದ್ದಾಗ ಬೇಸರಿಸಿಕೊಳ್ಳುವ ಲಾವಣ್ಯ, ಶರವಣ ಹೆಚ್ಚು ಹೆಚ್ಚು ದುಡಿಯಲು ಆರಂಭಿಸಿದ ನಂತರ . . . ಮತ್ತೆ ತನ್ನ ಮನಸ್ಸನ್ನು ಬದಲಾಯಿಸಿಕೊಳ್ಳುವುದು ವಿಚಿತ್ರವೆನಿಸುತ್ತದೆ. ಶರವಣ ಸಾಮಾಜಿಕವಾಗಿ, ಆರ್ಥಿಕವಾಗಿ ಯಶಸ್ಸಿನ ಮೆಟ್ಟಿಲನ್ನು ಹತ್ತುತ್ತಿದ್ದಂತೆಯೇ . . . ಅವನ ಮನಸ್ಥಿತಿಯೂ ಬದಲಾಗುತ್ತದೆ. ಎಲ್ಲಾ ಹಂತಗಳಲ್ಲೂ ಕುಟುಂಬಕ್ಕೆ ಅಗತ್ಯವಾದ ಪ್ರೀತಿ, ವಿಶ್ವಾಸ, ಮಾನಸಿಕ ಭದ್ರತೆಯ ಬಗ್ಗೆ ಯಾರೂ ಯೋಚಿಸುವುದಿಲ್ಲ.

'ಮತ್ತೊಬ್ಬನ ಸಂಸಾರ' ಕಥಾಸಂಕಲನದ – ವಿಚಿತ್ರ ಕಥೆ – 'ಕಾರಣ'. ದೊಡ್ಡಮನೆ ಘನಶ್ಯಾಮ ಪಂಡಿತರು ಊರಿನ ಭಾರೀ ವ್ಯಾಪಾರಿಗಳು. ಅವರಿಗೆ ಒಬ್ಬಳೇ ತಂಗಿ ಮುಕ್ತಾ. ಮುಕ್ತಾಳ ಮದುವೆ ಆಗಬೇಕಾದ ಕಾಲಕ್ಕೆ ಆಗಲೇ ಇಲ್ಲ. ಅಂತೂ ಇಂತೂ ತೆರ್ನಮಕ್ಕಿಯ ಮನೆತನವೊಂದಕ್ಕೆ ಎಲ್ಲಾ ಕೂಡಿಬಂದು ಮದುವೆಯಾಯಿತು. ಘನಶ್ಯಾಮ ಪಂಡಿತರು ವರದಕ್ಷಿಣೆ ಧಾರಾಳವಾಗಿ ಕೊಟ್ಟರು. ಅವಳ ಗಂಡ ಅಚಾನಕ್ ತೀರಿ ಹೋಗುವವರೆಗೂ ಎಲ್ಲವೂ ಸರಿಯಾಗೇ ಇತ್ತು. ನಂತರ ಗಂಡನ ಮನೆಯವರ ಕಾಟ ಶುರುವಾಯಿತು. ಇದ್ದಕ್ಕಿದ್ದಂತೆ ಅವಳ ಕಣ್ಣಿಗೆ ಬಿದ್ದುದೆಲ್ಲವೂ ಹಾಳಾಗಿ ಹೋಗುತ್ತದೆ ಎಂಬ ಮಾತು ಚಾಲ್ತಿಗೆ ಬಂತು.

ಅವಳ ಕಣ್ಣಿಗೆ ಬಿದ್ದು ಕಾಯಿ ಕೊಡುವ ತೆಂಗಿನ ಮರ ಸಿಡಿಲಿಗೆ ಸುಟ್ಟು ಹೋಯಿತಂತೆ. ನಮ್ಮ ಮನೆಯ ಬಾವಿಯಲ್ಲಿ ನೀರು ಬರುವುದಿಲ್ಲ ಅಂದಳಂತೆ, ಅದೇ ಬೇಸಿಗೆಗೆ ಬಾವಿಯ ತಳ ಕಾಣಿಸಿದಂತೆ, ಮಹಮ್ಮಾಯಿ ದೇವಿಯ ತೇರು ನೋಡಲಿಕ್ಕೆ ಎರಡು ಕಣ್ಣುಸಾಲದು ಅಂದಳಂತೆ, ರಥದ ಕೀಲು ಮುರಿದು ಬಿತ್ತಂತೆ. ಅಲ್ಲ, ದೇವರಿಗೂ ತಾಳಿಕೊಳ್ಳಲಿಕ್ಕೆ ಆಗದಷ್ಟು ಅವಳ ಕಣ್ಣು ಉಗ್ರವೇ? ಹೀಗೆ ಅವಳ ಮೇಲೆ ಅಪವಾದಗಳ ಮೇಲೆ ಅಪವಾದಗಳು ಬಂದವು.

ಇದಕ್ಕೆಲ್ಲಾ ಕಲಶವಿಟ್ಟ ಹಾಗೆ ಅವಳ ಮೈದುನನ ಮಗ ಹುಡುಗಾಟಕ್ಕೆ ಅಡಿಕೆ ಮರ ಹತ್ತಲು ಹೋಗಿ ಕಾಲು ಜಾರಿಬಿದ್ದು ಪ್ರಾಣಬಿಟ್ಟ, ಈ ಘಟನೆ ಜರುಗುವ ಮುಂಚೆ ಮುಕ್ತಾ ಏನೇನು ಹೇಳಿದ್ದಳು ಎಂದೆಲ್ಲಾ ತನಿಖೆಯಾಗಿ ಮುಂದಿನ ವಿಚಾರ ಮಾಡುವ ಮೊದಲೇ ಅವಳ ಮೈದುನ ಉರಿವ ಕಟ್ಟಿಗೆಯನ್ನು ಹಿಡಿದು ಅವಳನ್ನು ಹೊಡೆಯಲು ಬಂದಿದ್ದನಂತೆ. ಪಾಪ ಯಾರದೋ ಮನೆಯಲ್ಲಿ ಅಡಗಿಕೊಂಡು ಆ ರಾತ್ರಿ ಕಳೆಯುತ್ತಾಳೆ.

ಮರುದಿನ ಅವಳ ಗಂಡನ ಹಿರಿಯ ಅಣ್ಣ ಅವಳನ್ನು ತವರಿಗೆ ಕರೆತರುತ್ತಾನೆ. ತಂಗಿಯ ಜೀವನದ ಪರಿಸ್ಥಿತಿಯಿಂದ ನೊಂದಿದ್ದ ಘನಶ್ಯಾಮ ಪಂಡಿತರು, 'ಮದುವೆ ಮಾಡಿಕೊಟ್ಟ ಮಾತ್ರಕ್ಕೆ ಅವಳ ಪಾಲಿಗೆ ಈ ಮನೆ ಮತ್ತು ಮನೆಯವರು ಇಲ್ಲ ಅಂತ ತಿಳಿದಿರೇನು? ಅರ್ಧ ಆಸ್ತಿ ಅವಳ ಹೆಸರಿಗೆ ಬರೆಯುತ್ತೇನೆ' ಎಂದು ಕೂಗಾಡಿ ಅವಳನ್ನು ತಮ್ಮ ಮನೆಗೆ ಕರೆತರುತ್ತಾರೆ. ಮತ್ತೆ ಮುಕ್ತಾ ಗಂಡನ ಮನೆಗೆ ಹೋಗಲಿಲ್ಲ.

ಸುದ್ದಿ ಹಬ್ಬಲಿಕ್ಕೆ ಕ್ಷಣಮಾತ್ರವೂ ತಡವಾಗಲಿಲ್ಲ. ಇಷ್ಟು ದಿನ ಇಲ್ಲದ ಅವಳ ಕೆಟ್ಟ ಕಣ್ಣು ಈಗ ಒಮ್ಮೆಲೇ ಹೇಗೆ ಬಂತು ಎಂದು ಯಾರೂ ಪ್ರಶ್ನಿಸಲಿಲ್ಲ. ಈ ಊರಲ್ಲಿ ಜರುಗಿದ ಎಲ್ಲಾ ಅನಾಹುತಗಳಿಗೆ ಅವಳ ಕಣ್ಣೇ, ಯಾವುದೋ ರೀತಿಯಿಂದ ಕಾರಣವೆಂದು ಹೆಸರು ಹಚ್ಚಲು ತಡವಾಗಲಿಲ್ಲ. ಕಾಣದ ಕೈಯನ್ನು ಎಲ್ಲರೂ ಮರೆತು ಎದುರು ಕಂಡ ಮುಕ್ತಾಳನ್ನು ಮಾತ್ರ ದೂರತೊಡಗಿದರು. ಕೈ ಮೀರಿದ ದುರಂತಗಳಿಗೆ ನಿರುದ್ದಿಶ್ಯ ನೋವುಗಳಿಗೆ ಇಷ್ಟು ಸುಲಭವಾಗಿ ಸಿಕ್ಕ ಕಾರಣವನ್ನು ಬಿಟ್ಟುಕೊಡಲು ಯಾರೂ ತಯಾರಿರುವುದಿಲ್ಲ.

ಅಣ್ಣ ಮಧುಕರ ಅರ್ಧ ಆಸ್ತಿ ಅವಳಿಗೆ ಸೇರಿತೆಂದು ಧಗಧಗನೆ ಮನಸ್ಸಿನಲ್ಲಿಯೇ ಉರಿದು ಮನೆಯಲ್ಲಿದ್ದ ಚಿನ್ನವನ್ನೆಲ್ಲಾ ಮೂಟೆಕಟ್ಟಿ 'ಚಿನ್ನವನ್ನು ದುಪ್ಪಟ್ಟು ಮಾಡುವ ಬಾವಾಜಿಗೆ ಕೊಟ್ಟುಬಿಡುತ್ತಾನೆ. ಊರಿನಲ್ಲಿ ಮುಕ್ತಾ ಓಡಾಡಿಕೊಂಡಿರುವುದೂ ಸಹ ಕಷ್ಟವಾಗಿ ಹೋಗುತ್ತದೆ.

ಅದೇ ಸಮಯಕ್ಕೆ, ಘನಶ್ಯಾಮ ಪಂಡಿತರು ಅಸುನೀಗುತ್ತಾರೆ. ಆಮೇಲೆ ಮುಕ್ತಾ ಮನೆಯಿಂದ ಹೊರ ಬರುವುದನ್ನೇ ಬಿಟ್ಟುಬಿಡುತ್ತಾಳೆ. ಎಂದೂ ಅವಳ ಸುಖ ಬಯಸದ ಊರಿನ ಜನರಿಗೆ ಇದರಿಂದ ಬಹಳ ಸಂತೋಷವಾಗುತ್ತದೆ. ತಮ್ಮ ಜೀವನ ಇನ್ನು ಹಸನಾಗುವುದೆಂದು ಊರಿನ ಜನ ನೆಮ್ಮದಿಯ ನಿಟ್ಟುಸಿರು ಬಿಡುತ್ತಾರೆ.

ಮಾವನ ಮದುವೆಗೆ ಮತ್ತುರಜೆ ಕಳೆಯಲು ಅಜ್ಜನ ಮನೆಗೆ ಬರುವ ನಿರೂಪಕ ಓಡಾಡುತ್ತಾ ಮುಕ್ತಾಳ ಅಣ್ಣ ಮಧುಕರನ ಅಂಗಡಿಗೆ ಬರುತ್ತಾನೆ. ಎಲ್ಲರಿಗೂ ಲಡ್ಡು ಪೊಟ್ಟಣಗಳನ್ನು ಕಾರ್ಯ ನಡೆದಿರುತ್ತದೆ. ನಿರೂಪಕನಿಗೆ ಮನೆಯ ಹತ್ತಿರವೇ ಇರುವ ಮಧುಕರನ ಮನೆಗೆ ಹೋಗುವ ಕೆಲಸ ಬರುತ್ತದೆ. ಮಧುಕರ ಅಂಗಡಿಯಲ್ಲಿ ಇರುವುದಿಲ್ಲ. ಅಂಗಡಿಯಲ್ಲಿ ಇಲ್ಲದ್ದಿದ್ದರೆ, ಮನೆಯಲ್ಲಿ ಇರುತ್ತಾನೆಂದು ಭಾವಿಸಿ ಅಲ್ಲಿಯೇ ಇದ್ದ ಮನೆಗೆ ಹೋಗುತ್ತಾನೆ. ಮನೆಯಲ್ಲಿ ನೀರವ ಮೌನ, ಯಾರೋ ಅವನನ್ನು ಕರೆದಂತಾಗುತ್ತದೆ. ಅದು ಮುಕ್ತಾ. ಈಗ ವಯಸ್ಸಾಗಿರುವ ಮುಕ್ತಾ.

ಹೆದರಿಕೆಯಿಂದಲೇ ಪೊಟ್ಟಣ ನೀಡಿ ಓಡಿ ಹೋಗೋಣವೆಂದು ನೋಡುತ್ತಾನೆ, ಆಗುವುದಿಲ್ಲ. ಆಕೆ ಸುಧೀರ ಮಾಮಾನ (ನಿರೂಪಕನ) ಮದುವೆ, ಆಭರಣ ಈ ಎಲ್ಲಾ ವಿಷಯಗಳ ಬಗ್ಗೆ ಬಹಳ ಕುತೂಹಲದಿಂದ ತಿಳಿದುಕೊಳ್ಳುತ್ತಾಳೆ. ಚಿಕ್ಕ ವಯಸ್ಸಿನ ಬಾಲಕರಿಗೆ ಏನೇನು ಗೊತ್ತಿದೆಯೋ ಅದೆಲ್ಲವನ್ನೂ ನಿರೂಪಕ (ಬಾಲಕ) ಒದರುತ್ತಾನೆ. ನಂತರ ಮನೆಗೆ ಬಂದಾಗ, ಮನೆಯಲ್ಲಿ ಎಲ್ಲರಿಗೂ ಹುಡುಗ ಕಳೆದುಹೋಗಿದ್ದಾನೆಂಬ ಆತಂಕ ಶುರುವಾಗಿರುತ್ತದೆ. ನೀನೇಕೆ ಅಲ್ಲಿ ಹೋದೆ? ಎಂದು ಎಲ್ಲರೂ ಕೇಳುವವರೆ!.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ನಿಜವಾದ ಸ್ಥಾನಮಾನ ಏನು? ಯಾರದೋ ಸಮಾಧಾನ, ಒಣ ಗೌರವ(?) ಪ್ರತಿಷ್ಠೆಗಳನ್ನು ಕಾಪಾಡಲು ಹೆಣ್ಣೊಬ್ಬಳು ಇಳಿವಯಸ್ಸಿನಲ್ಲಿ ಅಜ್ಞಾತವಾಸವನ್ನು ಅನುಭವಿಸಬೇಕಾಗುತ್ತದೆ.

ನಿವೃತ್ತಿಯಿಲ್ಲದ ಬದುಕಿನಲ್ಲಿ ನಿರಂತರ ದುಡಿಯುವ ಕುಟುಂಬದ ಮಹಿಳೆ ತನ್ನ ಆದ್ಯತೆಗಳನ್ನು ಹತ್ತಿಕ್ಕಿ ಸದಾ ಒತ್ತಡದಲ್ಲಿದ್ದರೂ . . . ನಗುತ್ತಿರುತ್ತಾಳೆ. ಯಾವ ತಪ್ಪನ್ನೂ ಮಾಡದ ಮುಕ್ತಾ . . . ಮದುವೆ ತಡವಾದರೂ ಎಂದು ಗೊಣಗದ ಸಿರಿವಂತರ ಮನೆಯ ಹೆಣ್ಣು ಮುಕ್ತಾ, ಮನೆಯ ಮೈದುನನಿಂದ ಹಲ್ಲೆಗೊಳಗಾಗುವುದನ್ನು ಕಷ್ಟಪಟ್ಟು ತಪ್ಪಿಸಿಕೊಳ್ಳುವ ಮುಕ್ತಾ, ಸರೀಕರ, ಊರವರ ಮುಂದೆ 'ಅಪಶಕುನ(?)ದ' ಚಿನ್ಹೆಯಾಗಿ ತಾತ್ಸಾರ, ನಿರ್ಲಕ್ಷ್ಯ, ದ್ವೇಷಕ್ಕೆ ಒಳಗಾಗುವ ಮುಕ್ತಾ, ಜನರ ಆಪಾದನೆಗಳನ್ನು ತಪ್ಪಿಸಿಕೊಳ್ಳಲು ತನ್ನ ಮನೆಯಲ್ಲಿಯೇ ಬಂಧಿಯಂತೆ ಜೀವಿಸುವ ಮುಕ್ತಾ . . . ಪುಟ್ಟ ಬಾಲಕನೊಬ್ಬ ಅಕಸ್ಮಾತ್ ಮನೆಗೆ ಬಂದಾಗ ಬಹಳ ಕುತೂಹಲದಿಂದ ಮದುವೆಯ ವಿವರಗಳನ್ನು ಕೇಳುವುದು ಆಕೆಯ ಮುಗ್ಧತೆಯನ್ನು ಪ್ರಕಟಪಡಿಸುತ್ತದೆ.

ಇಡೀ ಹಳ್ಳಿಯೆ ತನ್ನ ಬಗ್ಗೆ ನಕಾರಾತ್ಮಕವಾಗಿ ಮಾತನಾಡಿದರೂ, ಅವಳು ಯಾರನ್ನೂ ದೂರುವುದಿಲ್ಲ. ಅಪ್ಪಿತಪ್ಪಿಯೂ ಒಂದು ಕಹಿ ಮಾತನ್ನೂ ಆಡುವುದಿಲ್ಲ. ಹುಡುಗನಿಗೆ ಬೇಸರ ಪಡಿಸುವುದಿಲ್ಲ. ಇಲ್ಲಿ ಅವಳ ಮನಸ್ಸಿನಲ್ಲಿ ಯಾರ ಬಗ್ಗೆಯೂ ಕಲ್ಮಶವಿಲ್ಲದಿರುವುದು ತಿಳಿದುಬರುತ್ತದೆ. ಎಲ್ಲಾ ನೋವು, ಅವಮಾನಗಳನ್ನು ಸಹಜವಾಗಿಯೇ ಸ್ವೀಕರಿಸಿರುವ ಅವಳ ಧೋರಣೆ ಅಚ್ಚರಿಯನ್ನುಂಟು ಮಾಡುತ್ತದೆ.

ನಮ್ಮ ಸಾಮಾಜಿಕ ವ್ಯವಸ್ಥೆಯೆಂದರೆ, ಹೆಣ್ಣು ಸದಾ ಯಾವುದಾದರೊಂದು ಬಂಧನದಲ್ಲಿಯೇ ಇರಬೇಕು. ಬಾಲ್ಯದಲ್ಲಿ ತಂದೆ-ತಾಯಿಗಳು, ಯವ್ವನದಲ್ಲಿ ಗಂಡನ, ಮುಪ್ಪಿನಲ್ಲಿ ಮಕ್ಕಳ ಅಧೀನದಲ್ಲಿರಬೇಕು ಎಂದು ಸಮಾಜ ಬಯಸುತ್ತದೆ.

'ಕಾರಣ' ಕಥೆಯಲ್ಲಿ ಕಥೆಗಾರ ಯಾವ ರೀತಿಯ ಸರಿ-ತಪ್ಪುಗಳ ವಿಮರ್ಶೆಯನ್ನು ಮಾಡದೆಯೇ ಯಾರು ಸರಿ, ಯಾರು ತಪ್ಪು ಎನ್ನುವುದನ್ನು ನಮಗೆ ಮನದಟ್ಟು ಮಾಡುತ್ತಾರೆ.

ಪ್ರವಚನ, ಉಪನ್ಯಾಸಗಳನ್ನು ನೀಡದೆಯೇ ವಿವೇಕ ಶಾನಭಾಗರು ಹೆಣ್ಣು ಸಂಪ್ರದಾಯಸ್ಥ ಸಮಾಜದಲ್ಲಿ ಯಾವ ರೀತಿ ಶೋಷಣೆಗೆ ಒಳಗಾಗುತ್ತಾಳೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಮುಕ್ತಾ ಒಬ್ಬಳೇ ಇರುತ್ತಾಳೆಂದು ಊರಲ್ಲಿ ಎಲ್ಲರಿಗೂ ಗೊತ್ತು. ಯಾರೂ ಅವಳನ್ನು ಹುಡುಕಿಕೊಂಡು ಹೋಗುವುದಿಲ್ಲ.

ಅಂತಹುದರಲ್ಲಿ ಅಪರೂಪಕ್ಕೆ ಬಂದ ಈ ಬಾಲಕನ ಹತ್ತಿರ ಅವಳು ಏನಾದರೂ ಮಾತನಾಡಬಹುದಿತ್ತು. ಇಡೀ ಊರಿನವರು ಅವಳನ್ನು ದೂರವಿಟ್ಟರೂ . . . ಅವಳು ಯಾರ ಬಗ್ಗೆಯೂ ನಕಾರಾತ್ಮಕವಾಗಿ ಮಾತನಾಡದೇ ಸಧ್ಯದಲ್ಲಿ ಊರಿನಲ್ಲಿ ನಡೆದ ಮದುವೆಯ ಬಗ್ಗೆ ಮಾತ್ರ ವಿಚಾರಿಸುತ್ತಾಳೆ.

ನಮ್ಮ ಭಾರತೀಯ ಸಮಾಜದಲ್ಲಿ ಹೆಣ್ಣುಮಗಳು ಮದುವೆಯಾದ ಮೇಲೆ ಅವಳ ಗಂಡ ಸದಾ ಅವಳೊಂದಿಗೆ ಇರಬೇಕು. ಗಂಡ ಯಾವುದಾವುದೋ ಕಾರಣಕ್ಕಾಗಿ ಹೆಂಡತಿಯನ್ನು ಬಿಟ್ಟುಹೋದರೂ ಅದರ ಕಾರಣವೂ ಹೆಂಡತಿಯೇ ಆಗಿರಬೇಕು (ಜನರ ಊಹೆ).

ಗಂಡು ಮಕ್ಕಳು ಇಷ್ಟ ಬಂದ ರೀತಿಯಲ್ಲಿ ಜೀವನ ನಡೆಸಬಹುದು. ಮದುವೆ ಆಗದೇ ಇದ್ದಾಗಲೂ ಯಾರೂ ಅವರ ಬಗ್ಗೆ 'ಅಪಶಕುನ'ದ ಮಾತನಾಡುವುದಿಲ್ಲ. ಮದುವೆಯಾದ ಮೇಲೆ ಸಂಸಾರದಲ್ಲಿ ತೊಂದರೆ ಬಂದರೂ, ಗಂಡನಿಂದಲೇ ಬಂದರೂ ಅವನು 'ಅಪಶಕುನ'ವಾಗುವುದಿಲ್ಲ. ಗಂಡನಿಂದ ಮನೆಗೆ ಕೇಡಾಗುತ್ತದೆಯೆಂದು ಯಾರೂ ಹೇಳುವುದಿಲ್ಲ.

ಅವಿವೇಕಿ ಜನರ ಕಲ್ಪಿತ ದುರಾಲೋಚನೆಗಳಿಂದ ಒಬ್ಬ ನಿರುಪದ್ರವಿ ಹೆಣ್ಣುಮಗಳ ಬಾಳು ಅಂಧಕಾರದಲ್ಲಿ ಕಳೆಯುವಂತಾಗುತ್ತದೆ. ಹೆಣ್ಣು ಮಗಳನ್ನು 'ಮನೆಯ ಕಣ್ಣು' ಎನ್ನುವುದು ಒಮ್ಮೊಮ್ಮೆ ಕೇವಲ ಪುಸ್ತಕಗಳ ಅಲಂಕಾರಕ್ಕಾಗಿ ಅನಿಸುತ್ತದೆ.

ಜೀವನದಲ್ಲಿ ಅನಿರೀಕ್ಷಿತವಾಗಿ ನಡೆಯುವ ಘಟನೆಗಳಿಂದ ಪ್ರಾಮಾಣಿಕ ಬದುಕು ಅಸಹನೀಯವಾಗಬಾರದು. ಎಲ್ಲಾ ದಿನಗಳೂ ಒಂದೇ ರೀತಿ ಇರುವುದಿಲ್ಲ. ಅದು ಸುಖ, ದುಃಖಗಳಿಗೂ ಅನ್ವಯವಾಗುತ್ತದೆ. ಇಂತಹ ಕಥೆಗಳನ್ನು ಓದುವುದರ ಮೂಲಕವಾದರೂ ಜನರು–ತಮ್ಮಿಂದ ಇತರರ ಬದುಕಿಗೆ ಆಗುತ್ತಿರುವ ಅನ್ಯಾಯವನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ತಮ್ಮಿಂದ ಇನ್ನೊಬ್ಬರು ಕತ್ತಲಲ್ಲಿ ಕಣ್ಣೀರು ಹಾಕಿದರೆ . . . ಅದರ ಬಿಸಿ ಯಾರಿಗೆ ತಟ್ಟುತ್ತದೆ? ಯೋಚನೆ ಮಾಡಬೇಕಲ್ಲವೇ?

ಸಮಾಜದಲ್ಲಿ 'ಗುರು'ವೆಂದರೆ ದೇವರಿಗೆ ಸಮಾನವೆಂಬ ನಂಬಿಕೆ ನಮ್ಮ ದೇಶದಲ್ಲಿದೆ. ಊರಿನಲ್ಲಿ ಪಿ.ಟಿ.ಮಾಸ್ತರು – ಸುಬ್ಬರಾಯಪ್ಪ – ತನ್ನನ್ನು ಎದುರಿಸುವ ಎದೆಗಾರಿಕೆ ಯಾರಿಗೂ ಇಲ್ಲ ಎಂಬ ಧಿಮಾಕಿನಿಂದ ತನ್ನ ತಾರುಣ್ಯ ಮತ್ತು ಹುಮ್ಮಸ್ಸು ಸತತ ಎಂಬ ಹುಂಬತನದಲ್ಲೇ ಅವರು ನಡೆದುಕೊಳ್ಳುತ್ತಿದ್ದರು. ಆದರೆ,

ವಿದ್ಯಾರ್ಥಿಯೊಬ್ಬಳ ಧೈರ್ಯವಂತಿಕೆಯ ತಿರುಗೇಟು ಸುಬ್ಬರಾಯಪ್ಪನವರನ್ನು ಬದಲಾಯಿಸಿ ಬಿಡುತ್ತದೆ. (ಕಥೆ– ಅಂಚು)

'ಚಪಲ ಚೆನ್ನಿಗರಾಯನ' ಬುದ್ಧಿಯ ಸುಬ್ಬರಾಯಪ್ಪನವರನ್ನು ಹೆಡ್ ಮಾಸ್ತರರೂ ಸಹ ಹದ್ದುಬಸಿನಲ್ಲಿಡಲು ಪ್ರಯತ್ನಿಸದೇ ಇರುವುದು ಅಚ್ಚರಿಯನ್ನು ಉಂಟು ಮಾಡುತ್ತದೆ. ಎಲ್ಲಾ ಕಟ್ಟಳೆಗಳಿಗೂ ತಾವು ಅತೀತರೆಂಬಂತೆ ಸುಬ್ಬರಾಯಪ್ಪನವರು ಪ್ರೌಢಶಾಲೆಯ ವಿದ್ಯಾರ್ಥಿನಿಯರೊಂದಿಗೆ ಒಮ್ಮೊಮ್ಮೆ ಸ್ವೇಚ್ಛೆಯಿಂದ ವರ್ತಿಸುತ್ತಾರೆ. ಹೆಣ್ಣು ಮಕ್ಕಳ ಬೆನ್ನಮೇಲೆ ಕೈ ಹಾಕುವುದು, ಅವರ ಹಿಂಭಾಗವನ್ನು ಸವರುವುದು, ಇದೆಲ್ಲವನ್ನು ಸ್ವಲ್ಪವೂ ಎಗ್ಗಿಲ್ಲದೆ ಮಾಡುತ್ತಿದ್ದರು. ಕೆಲವು ವಿದ್ಯಾರ್ಥಿನಿಯರು ಅವರಿಂದ ತಪ್ಪಿಸಿಕೊಳ್ಳಲು ಕಾರಣಗಳನ್ನು ಹೇಳಿ ದೂರವೇ ಇರುತ್ತಿದ್ದರು.

ಒಮ್ಮೆ ಶಾಲೆಯಲ್ಲಿ 'ಗ್ಯಾದರಿಂಗ್' ದಿನ ಅತಿಥಿಗಳ ಭಾಷಣ ಮುಗಿದು ಎಲ್ಲರೂ ಎದುರು ನೋಡುತ್ತಿದ್ದ ಮನರಂಜನಾ ಕಾರ್ಯಕ್ರಮ ಶುರುವಾಗಿತ್ತು. ನಾಟಕಕ್ಕೆ ಸೈಡ್ ವಿಂಗ್‌ನಲ್ಲಿ ನಟ–ನಟಿಯರು ಕಾಯುತ್ತಿದ್ದರು. ಎಲ್ಲರ ಹಿಂದೆ ನಿಂತ ಸುಬ್ಬರಾಯಪ್ಪನವರು 'ಸವಿತಾ' ಎಂಬ ಹುಡುಗಿಯ ಹಿಂಭಾಗವನ್ನು ತಟ್ಟಿ 'ಸರಿಯಾಗಿ ಮಾಡೆ, ಮಾತ್ ಮರೀಬೇಡಾ' ಎಂದು ಹೇಳಿದರು. ಅವಳು ತನ್ನ ಕೈಯಿಂದ ಅವರ ಕೈಯನ್ನು ಹಿಡಿದಳು. ಅದನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂದು ಗೊತ್ತಾಗುವುದರೊಳಗೆ ಅವರ ಕೈ ಬೆರಳುಗಳನ್ನು ಗಟ್ಟಿಯಾಗಿ ಹಿಡಿದು ತಿರುಚಿದಳು. ತಮ್ಮ ವ್ಯಕ್ತಿತ್ವದ ಒಂದು ಪೊಳ್ಳುತನ ಬಯಲಿಗೆ ಬಂದಂತೆನಿಸಿತು – ಎಂದೂ ತನ್ನನ್ನು ತಾನು ತಿದ್ದಿಕೊಳ್ಳದೆ ಇದ್ದ ಸುಬ್ಬರಾಯಪ್ಪನವರು – ಈ ಘಟನೆಯ ನಂತರ – – – ಹುಡುಗಿಯರೊಂದಿಗೆ ಅಸಭ್ಯವಾಗಿ ವರ್ತಿಸುವುದನ್ನು ನಿಲ್ಲಿಸಿದರು.

ಅದೇ ಶಾಲೆಯಲ್ಲಿ ಕೆಲಸ ಮಾಡುವ ಜೀಜಾಬಾಯಿಯವರ ವ್ಯಕ್ತಿತ್ವವು . . . ಹಣವೇ ಎಲ್ಲವೂ ಅಲ್ಲ ಜೀವನದಲ್ಲಿ ಹಣವಿದ್ದರೆ ಜೀವನ ಸುಖವೆಂಬ 'ಅಪನಂಬಿಕೆ'ಯನ್ನು ದೂರ ಮಾಡುತ್ತದೆ. ಜೀಜಾಬಾಯಿ ಸಿರಿವಂತರ ಮನೆತನದ ಹೆಣ್ಣು ಮಗಳು. ಮನೆಯಲ್ಲಿ ತಂದೆಗೆ ಇಬ್ಬರು ಹೆಂಡತಿಯರು ಅಪಾರವಾದ ಆಸ್ತಿಯನ್ನು ಹೊಂದಿರುವ ತಂದೆ ಯಾವುದೇ ಎಗ್ಗಿಲ್ಲದೆ ಮನೆಯಲ್ಲಿ ಮಕ್ಕಳ ಮುಂದೆ ತನ್ನ ವಿಲಾಸಿ ಜೀವನವನ್ನು ನಡೆಸುತ್ತಿರುತ್ತಾನೆ. ಬೆಳೆದ ಮಕ್ಕಳಿಗೆ ಮದುವೆಯ ಮಾಡುವ ಚಿಂತೆಯಿಲ್ಲ. ಯಾರಾದರೂ ಬೇರೆಯವರು ಈ ವಿಷಯದ ಬಗ್ಗೆ ನೆನಪು ಮಾಡಿದರೆ 'ಅವರವರೇ ಹುಡುಕಿಕೊಳ್ಳಲಿ. ಅವರಿಗೆ ಯಾರನ್ನಾದರೂ ಕೂಡಿಕೆ ಮಾಡಿಕೊಳ್ಳಲಿ ಬೇಕಿದ್ದರೆ, ಯಾರನ್ನಾದರೂ ಇಟ್ಟುಕೊಳ್ಳಲಿ ಬೇಕಿದ್ದರೆ' ಅನ್ನುತ್ತಿದ್ದ. ಜೀಜಾಬಾಯಿಯ ಇಬ್ಬರೂ ಅಮ್ಮಂದಿರು ಮುಸುಮುಸು ನಗುತ್ತ ಈ ನಾಟಕ ನೋಡುತ್ತಿದ್ದರು. ಮನಸ್ಸಿನಲ್ಲಿಯೇ ಮಂಡಿಗೆ ತಿನ್ನುತ್ತಿದ್ದ ಮಕ್ಕಳು ಪೆಚ್ಚಾಗಿ ಸುಮ್ಮನಾಗುತ್ತಿದ್ದರು. ತಂದೆ–ತಾಯಿಗಳ

ಬೇಜವಾಬ್ದಾರಿಯಿಂದ ಜೀಜಾಬಾಯಿ ಯವರು ತಮ್ಮ ಜೀವಿತ ಕಾಲದವರೆಗೂ ಅವಿವಾಹಿತೆಯಾಗಿಯೇ ಉಳಿಯಬೇಕಾಯಿತು.

ಮಕ್ಕಳ ಇಚ್ಚೆಗೆ ವಿರುದ್ಧವಾಗಿ ಒಣಪ್ರತಿಷ್ಠೆಗಾಗಿ ತಂದೆ-ತಾಯಿಗಳು ಮಕ್ಕಳ ಆಸೆಗಳ ವಿರುದ್ಧ ಹೋಗುವುದನ್ನು 'ಕೆಲವು ತತ್ವಗಳ ಸಲುವಾಗಿ' ಎಂಬ ವಿವೇಕ ಶಾನಭಾಗರ ಕಥೆ ಅತ್ಯಂತ ಮಾರ್ಮಿಕವಾಗಿ ಚಿತ್ರಿಸುತ್ತದೆ.

ಘನಶ್ಯಾಮ ಹತ್ತನೇ ತರಗತಿಯನ್ನು ಶೇಕಡ ಅರವತ್ತೊಂದು ಅಂಕ ಗಳಿಸಿ ಫಸ್ಟ್ ಕ್ಲಾಸಿನಲ್ಲಿ ಪಾಸು ಮಾಡಿದ್ದು, ಎಲ್ಲರ ನಿರೀಕ್ಷೆಗೂ ಮೀರಿದ ಫಲಿತಾಂಶವಾಗಿತ್ತು. ಇಡೀ ಕುಟುಂಬದ ಸಂತೋಷಕ್ಕೆ ಕಾರಣನಾದೆನೆಂದು ಉಂಟಾದ ಹೆಮ್ಮೆ ಮತ್ತು ಸಾರ್ಥಕತೆಯ ಭಾವನೆ ಘನಶ್ಯಾಮನಿಗೆ ಮುಂದೆ ಎಂದೂ ದೊರಕುವುದಿಲ್ಲ. ಈ ಚಿಕ್ಕ ಯಶಸ್ಸಿನಿಂದ ಅವನ ತಂದೆ-ತಾಯಿಗಳ ಅಪೇಕ್ಷೆಗಳು ಏಕೆ ಬೇರೆಯಾಗಿಬಿಟ್ಟವು ಎಂದು ಘನಶ್ಯಾಮನಿಗೆ ಕೊನೆಯವರೆಗೂ ಹೊಳೆಯುವುದೇ ಇಲ್ಲ.

ಘನಶ್ಯಾಮನಿಗೆ ಇಷ್ಟವಿಲ್ಲದಿದ್ದರೂ ಅವನು ವಿಜ್ಞಾನವನ್ನೇ ಆರಿಸಬೇಕಾಗುತ್ತದೆ. ಇಷ್ಟು ಕಡಿಮೆ ಅಂಕಗಳಿಸಿ ವಿಜ್ಞಾನಕ್ಕೆ ಸೀಟು ಕೇಳಲು ಬಂದ ಅವನನ್ನು ಕಾಲೇಜುಗಳಲ್ಲಿ ಗುಮಾಸ್ತರಿಂದ ಹಿಡಿದು ಆಡಳಿತ ಮಂಡಳಿಯವರೆಗೆ ನಡೆಸಿಕೊಂಡ ರೀತಿ ಅವನ ಒಳಗಿನ ಕೋಪಕ್ಕೆ ಕಾರಣವಾಗುತ್ತದೆ. ಯಶಸ್ಸು ಇಲ್ಲದಿದ್ದರೆ ಆಯ್ಕೆಯ ಯಾವ ಸಂಕಟಗಳೂ ಇರುತ್ತಿರಲಿಲ್ಲವೇನೋ ಎಂದು ನೊಂದುಕೊಳ್ಳುತ್ತಾನೆ.

'ಮನೆಯವರ ಕನಸುಗಳನ್ನು ಕೆಡವಿ' . . . ಕಲಾವಿಭಾಗಕ್ಕೆ ಹೋಗುತ್ತಾನೆ. ವಿಜ್ಞಾನದ ಕಗ್ಗಂಟನ್ನು ಬಿಡಿಸಲಾಗದ ತನ್ನ ದೌರ್ಬಲ್ಯದಿಂದಾಗಿ ತಾನು ಕಲಾವಿಭಾಗಕ್ಕೆ ಬಂದದ್ದಲ್ಲ. ಅವರೇ ಇದಕ್ಕೆ ಸಹಾಯ ಮಾಡಿದ ರಾಮದಾಸನೆಂಬ ಸೀನಿಯರ್‌ಗೆ ಘನಶ್ಯಾಮ ಸದಾ ಚಿರಋಣಿ.

ವಿದ್ಯಾರ್ಥಿ ದಿಸೆಯಲ್ಲಿ ಮೂಡಿಬರುವ ಅರ್ಥವಾಗದ ಆದರ್ಶ, ಬಂಡಾಯ ಎಲ್ಲವೂ ಘನಶ್ಯಾಮನಿಗೆ ವಿಶೇಷವೆನಿಸುತ್ತದೆ. ಆದರೆ, ಅವನ ತಂದೆ-ತಾಯಿಗಳಿಗೆ ಇದರ ಬಗ್ಗೆ ಅಸಡ್ಡೆ ಇದೆ.

ಬಡವರ ಪರ ಚಿಂತನೆ, ರಾಜಕಾರಣಿಗಳ ಉಡಾಫೆ ವರ್ತನೆ ಎಲ್ಲವೂ ಕಲಸುಮೇಲೋಗರವಾಗಿರುವಂತೆ ತೋರುತ್ತದೆ. ಏನೋ ದೊಡ್ಡ ಕ್ರಾಂತಿಯಾಗುತ್ತದೆಯೆಂದು ಭಾವಿಸುವ ಘನಶ್ಯಾಮನಿಗೆ, ರಾಮದಾಸನ ತುಂಬಿದ ಕಣ್ಣಾಲಿಗಳಲ್ಲಿ 'ತತ್ವಗಳ' ದುರಂತದ ಛಾಯೆ ಕಾಣಿಸುತ್ತದೆ.

ವಿವೇಕ ಶಾನಭಾಗರ ನೀಳ್ಗತೆ 'ಘಾಚರ್ ಘೋಚರ್'; ಅತ್ಯಂತ ಗೊಂದಲಮಯವಾದ ಅಪರೂಪವಾದ ಈ 'ತಲೆಬರಹ' ಓದುಗರಲ್ಲಿ ಅಚ್ಚರಿಯನ್ನು ಉಂಟುಮಾಡುತ್ತದೆ.

ವಿನ್ಸೆಂಟ್ ಕಾಫೀ ಹೌಸಿನಲ್ಲಿ ವೇಟರ್ ಆಗಿದ್ದಾನೆ. ಈಗ ಅದು ಕುಡಿತವನ್ನು ಅತ್ಯಂತ ಸಭ್ಯ ಸಂಭ್ರಮದ ಚಟುವಟಿಕೆ ಎನಿಸುವಂತೆ ಮಾಡುವ, ಮೋಜಿನ ಬಗ್ಗೆ ಪಾಪಪ್ರಜ್ಞೆ ಹುಟ್ಟಿಸದ ಸ್ಥಳವಾಗಿ ಮಾರ್ಪಟ್ಟಿದೆ. ವಿನ್ಸೆಂಟ್ ಕಾಫಿ ಕೊಡುವಾಗ ಅಥವಾ ನೊರೆಯನ್ನು ನಿಯಂತ್ರಿಸುತ್ತ ಬಿಯರು ಹೊಯ್ಯುವಾಗ ಅಥವಾ ಉಳಿದವರು ಚಾಕುವಿನಿಂದ ಕಟ್ಲೆಟ್ ಕತ್ತರಿಸುತ್ತ ಅಭಿನಯಿಸುವ ನಯನಾಜೂಕನ್ನು ನೋಡಿ ಮುಗುಳ್ನಗುವಾಗ ನಮ್ಮ ಆತ್ಮದೊಳಗೆ ಒಮ್ಮೆ ಹಣಕಿ ನೋಡುತ್ತಾನೆಂಬುದು ನನ್ನ ಅನುಭವ' – ನಿರೂಪಕನ ಮಾತು.

ಎಲ್ಲರ ದುಃಖಗಳನ್ನು ಅವರನ್ನು ನೋಡುತ್ತಲೇ ಅರ್ಥಮಾಡಿಕೊಳ್ಳುವ 'ವಿನ್ಸೆಂಟ್' ನನ್ನು ನಿರೂಪಕ 'ದೇವರು' ಎಂದು ಕರೆದಿರುವುದು ನಾವು ಗಮನಿಸಬೇಕಾದ ವಿಷಯ. ಇಡೀ ಕಥೆಯಲ್ಲಿ ಕಡಿಮೆ ಮಾತನಾಡುವ ವಿನ್ಸೆಂಟ್‌ನ ಪ್ರಸ್ತಾಪದಿಂದ ಕಥೆ ರಾಚನಿಕವಾಗಿ ತೀರಾ ಕುತೂಹಲಕಾರಿಯಾಗಿದೆ.

'ಘಾಚರ ಘೋಚರ್' ಎಂಬ ವಿಚಿತ್ರ ಹೆಸರು ಏನಿರಬಹುದೆಂಬ ಕುತೂಹಲ ಮೂಡುವುದು ಸಹಜವಷ್ಟೇ !. ಯಾವುದೇ ಸರಳ ವಿಶ್ಲೇಷಣೆ, ವಿವರಣೆಗಳಿಗೆ ಸಿಲುಕಿದ, ಗಂಟುಗಂಟಾದ, ಸಿಕ್ಕುಸಿಕ್ಕಾದ, ಗೋಜಲು–ಗೋಜಲಾದ, ಅರ್ಥವಾಗಲಾರದ ಮನುಷ್ಯ ಸ್ವಭಾವ ಸಂಬಂಧ–ನಡಾವಳಿಗೆ ರೂಪಕವೆಂಬಂತೆ ಈ ಶಬ್ದವನ್ನೇ ಶೀರ್ಷಿಕೆಯಾಗಿ 2012 ರಲ್ಲಿ ವಿವೇಕ ಶಾನಭಾಗರು ತಮ್ಮ ಕಥೆಯೊಂದಕ್ಕೆ ಹಾಗೂ ಇದೇ ಹೆಸರಿನ ತಮ್ಮ ಕಥಾಸಂಕಲನವೊಂದನ್ನು ಹೊರತಂದರು.

'ಘಾಚರ್ ಘೋಚರ್' ಕಥೆ ಕೇವಲ, ಕಷ್ಟ, ಗೊಂದಲ, ಜಗಳಗಳನ್ನು ಮಾತ್ರ ನಿರುಪಿಸುವುದಿಲ್ಲ. ಅದು ಗಂಡನಿಂದ ಬೇರೆಯಾಗಿ ಬಂದ ಮಾಲತಿ ಬದುಕನ್ನು ದಿಟ್ಟವಾಗಿ ಎದುರಿಸಿದ, ಜಾಣತನದಿಂದ ನಿಭಾಯಿಸಿದ, ತನ್ನ ಬಗ್ಗೆ ಉಳಿದವರ ಅನಾದರ ತೀವ್ರವಾದಾಗ ಸಿಡಿದೆದ್ದ ಪ್ರಸಂಗಗಳನ್ನು ದಾಖಲಿಸುತ್ತದೆ.

ಈ ಕಥೆಯಲ್ಲಿ ನಿರೂಪಕ ತನ್ನ ಕೂಡು ಕುಟುಂಬದ ಕಥೆಯನ್ನು ಹೇಳುತ್ತಲೇ ತನ್ನ ತಾಯಿ, ಅಕ್ಕ ಮಾಲತಿ, ಹೆಂಡತಿ ಅನಿತಾ, ಈ ಮೂವರು ಯಾವ ರೀತಿ ತನ್ನ ಜೀವನ ಅರ್ಥವಂತಿಕೆಯನ್ನು ವಿಸ್ತರಿಸಿದ್ದಾರೆಂಬುದನ್ನು ಅಲ್ಲಲ್ಲಿ ವ್ಯಂಗ್ಯದಿಂದ ಬಹಳಷ್ಟು ಸಲ ತಾಳ್ಮೆಯಿಂದ, ಪ್ರೀತಿಯಿಂದ ನಿರೂಪಿಸಿದ್ದಾನೆ.

ನಿರೂಪಕನ ಉತ್ತಮ ಪುರುಷ ನಿರೂಪಣೆಯಲ್ಲಿರುವ ಈ ಕಥೆ ಸರಳ ರೇಖಾತ್ಮಕವಾಗಿ, ಕಾಲಾನುಕ್ರಮಣಿಕೆಯಲ್ಲಿ ಸಾಗುವುದಿಉಲ್ಲ. ವರ್ತಮಾನ-ಭೂತಗಳಲ್ಲಿ ಚದುರಿ ಹೋದ ಅನೇಕ ಘಟನೆಗಳು ನಿರೂಪಕನ ಮನಸ್ಸಿನಲ್ಲಿ ಕೂಡಿಕೊಂಡು ಒಂದು ಆಕಾರ ಪಡೆದು ಅವನ ತತ್ವ ಚಿಂತನೆ ಮತ್ತು ಟೀಕೆ-ಟಿಪ್ಪಣಿಗಳ ಸಮೇತ ಮಂಡಿತವಾಗುತ್ತವೆ.

ತುಂಬಾ ತೀವ್ರವಾದ, ಸಾಂದ್ರವಾದ ಅವನ ನಿರೂಪಣೆಯಲ್ಲಿ ಘಟನೆಗಳು, ಪಾತ್ರಗಳು, ಅವುಗಳ ಬಹುಮುಖ ಆಯಾಮಗಳಲ್ಲಿ ಸೂಕ್ಷ್ಮವಾಗಿ ಓದುಗರ ಎದುರಿಗೆ ಬಿಚ್ಚಿಕೊಳ್ಳುತ್ತ ಹೋಗುತ್ತವೆ. ತನ್ನೆಲ್ಲ ಅರೆಕೊರೆಗಳ ಸಹಿತ ಚಿತ್ರಿಸಿಕೊಳ್ಳುವುದರಿಂದ ಅವನ ಉತ್ತಮಪುರುಷ ನಿರೂಪಣೆಗೆ ಒಂದು ಮಟ್ಟದ ಅಧಿಕೃತತೆ ಮತ್ತು ವಿಶ್ವಸನೀಯತೆಗಳು ದಕ್ಕಿವೆ ಎಂದು ಧಾರಾಳವಾಗಿ ಹೇಳಬಹುದು.

ಮನುಷ್ಯನು ತನ್ನ ಅತಿ ಮುಖ್ಯವಾದ ಸಂಬಂಧಗಳನ್ನು ಸಹ ಸಮರ್ಥವಾಗಿ ನಿಭಾಯಿಸುವುದು ಎಲ್ಲಾ ಕಾಲಗಳಲ್ಲೂ ಸಾಧ್ಯವಾಗುವುದಿಲ್ಲ. ಸಾಮಾಜಿಕ ಕಳಕಳಿ ಅನೇಕ ಸಲ ಅವನ ಸ್ವಹಿತ ಚಿಂತನೆಯನ್ನು ಹಿಂದಕ್ಕೆ ಹಾಕುತ್ತದೆ ಎಂಬ ತತ್ವವನ್ನು ವಿವೇಕ ಶಾನಭಾಗರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

## ಅಧ್ಯಾಯ–7 : ವಿವೇಕ ಶಾನಭಾಗರ ಕಥೆಗಳಲ್ಲಿನ ಸ್ತ್ರೀ ಪಾತ್ರಗಳು

ಜೀವನವನ್ನು ವ್ಯಾಪಿಸಿರುವ ಮೌಲ್ಯಗಳು ಸರಳವಾಗಿರುವುದಿಲ್ಲ. ಅದೇ ರೀತಿ ನಮ್ಮ ಸುತ್ತ–ಮುತ್ತಲಿನ ಸ್ತ್ರೀ ವ್ಯಕ್ತಿತ್ವಗಳು ಸದಾ ಒಳ್ಳೆಯವರೋ ಅಥವಾ ಸದಾ ಕೆಟ್ಟವರಾಗಿರಲು ಸಾಧ್ಯವಿಲ್ಲ. ಪರಿಸ್ಥಿತಿಯ ಕೈಗೊಂಬೆಗಳಾಗಿ ಅವರು ವರ್ತಿಸುತ್ತಿರುತ್ತಾರಷ್ಟೆ. ವಿವೇಕ ಶಾನಭಾಗರ ಕಥೆಗಳಲ್ಲಿನ ಸ್ತ್ರೀ ಪಾತ್ರಗಳಿಗೂ ಈ ಮಾತು ಅನ್ವಯಿಸುತ್ತದೆ.

ವಿವೇಕರ ಮೊದಲ ಕಥಾ ಸಂಕಲನ 'ಅಂಕುರ'ದಲ್ಲಿ ಅನೇಕ ವಿಭಿನ ಸ್ತ್ರೀ ಪಾತ್ರಗಳಿವೆ. ಅವು ಎಂದೂ ಅತಿಯಾಗಿ ಗೋಗರೆಯುವುದಿಲ್ಲ.

'ಪರಸ್ಪರ' ಕಥೆಯ ಪೇಮಕ್ಕ ಕಥಾನಾಯಕ ಪ್ರಕಾಶನಿಗಿಂತ ವಯಸ್ಸಿನಲ್ಲಿ ದೊಡ್ಡವಳು, ಪ್ರಕಾಶನಲ್ಲಿ ಗಂಡು ಹೆಣ್ಣಿನ ಸಂಬಂಧದ ಕುರಿತಾದ ಕಲ್ಪನೆ ಆರಂಭವಾದದ್ದೇ ಪ್ರೇಮಕ್ಕನನ್ನು ನೋಡುತ್ತಾ.

ಪ್ರೇಮಕ್ಕ ಎಲ್ಲ ಮನೆಯ ಹಿರಿಯ ಹೆಣ್ಣುಮಗಳಂತೆ ಪ್ರಕಾಶನಿಗೆ ಸದಾ ಬುದ್ಧಿವಾದವನ್ನು ಹೇಳುತ್ತಾ ತನ್ನ ಪ್ರೌಢಿಮೆಯನ್ನು ಮೆರೆದವಳು.

'ಅವಳ ಸ್ವಭಾವ ಪರಿಮಳದ ಕಡ್ಡಿ ಅನ್ನುತ್ತಾರಲ್ಲ ಅಂಥದ್ದು' – ಪುಟ 9 (ಕಥೆ–ಪರಸ್ಪರ).

ಇದೇ ಕಥಾಸಂಕಲನದ 'ಅಂಕುರ' ಎಂಬ ಕಥೆಯಲ್ಲಿ ಬರುವ 'ರೇವತಿ'ಯ ಪಾತ್ರದ ಒಳತೋಟಿ ಕಥಾನಾಯಕನಿಗೆ ಅರ್ಥವಾಗುವುದೇ ಇಲ್ಲ. ನಾಯಕನ ಬಗೆಗೆ ಅವಳ ಭಾವನೆ ಏನು? ಅದು ತಿಳಿಯುವುದೇ ಇಲ್ಲ. ನಾಯಕ ಆಕೆಯ ಬಗ್ಗೆ ಏನೇನೋ ಕಲ್ಪಿಸಿಕೊಂಡು ವರ್ತಿಸುವುದು ವಿಚಿತ್ರವೆನಿಸುತ್ತದೆ.

ಅವರ 'ಮಗು' ಎಂಬ ಕಥೆಯಲ್ಲಿ ನಾಯಕ ಸತೀಶನ ಹೆಂಡತಿ ಸವಿತ. ದೂರದ ಊರಿನಿಂದ ಬರುವ ಸಂಬಂಧಿ ಆನಂದ ಬಿರಾಜದಾರ . . ಸವಿತಳೊಂದಿಗೆ ಅತ್ಯಂತ ಆತ್ಮೀಯತೆಯಿಂದ, ಪ್ರೀತಿಯಿಂದ ನಡೆದುಕೊಳ್ಳುತ್ತಾನೆ. ಗಂಡನಾದ ಸತೀಶನಿಗೆ ಒಮ್ಮೊಮ್ಮೆ ಇದು ಅತಿ ಎನ್ನಿಸಿ ಸಿಟ್ಟು ಬರುತ್ತದೆ. ಆದರೂ ಸಂಯಮದಿಂದ ಸಹಿಸಿಕೊಳ್ಳುತ್ತಾನೆ. ಗರ್ಭಿಣಿಯಾದ ಸವಿತಳ ಆರೈಕೆ ಅತ್ಯಂತ ಮುತುವರ್ಜಿಯಿಂದ ನಡೆಯುತ್ತದೆ. ಅತಿಥಿ ಆನಂದ ಮಧ್ಯಾಹ್ನದ ಹೊತ್ತಿನಲ್ಲಿಯೂ ಸವಿತಳೊಂದಿಗೆ ಹರಟೆ ಹೊಡೆಯುವುದು ಸತೀಶನಿಗೆ ಸ್ವಲ್ಪವೂ ಇಷ್ಟಾವಾಗುವುದಿಲ್ಲ. ತಂದೆ–ತಾಯಿಯ ವಿರುದ್ಧ ಕಟ್ಟಿಕೊಂಡು ಪ್ರೇಮ–ವಿವಾಹವಾಗಿದ್ದರಿಂದ . . . ಹೆಂಡತಿಯನ್ನು ನೋಯಿಸುವುದು ಸತೀಶನಿಗೆ ಇಷ್ಟವಿಲ್ಲ.

ಸವಿತಳ ಸ್ನೇಹದ ಸಲುಗೆಯಿಂದ ಆನಂದ ಬಿರಾಜದಾರ ತನಗೂ ಅವಳಿಂದ ಒಂದು ಮಗು ಬೇಕು ಎಂದಾಗ ಸವಿತಳಿಗೆ ಆಘಾತವಾಗುತ್ತದೆ. ಗಂಡ ಸತೀಶ ಈ ಆಘಾತವನ್ನು ಅರ್ಥಮಾಡಿಕೊಂಡು ಅವಳನ್ನು ಸಂತೈಸುತ್ತಾನೆ.

ಈ ಕಥೆಯಲ್ಲಿ ಸವಿತ 'ಕಡುಗಪ್ಪು ಬಣ್ಣದ ಹಣೆಯ ಮಧ್ಯೆ ಒಂದು ಗುಡ್ಡೆಯಿರುವ, ಎಣ್ಣೆಯಿಟ್ಟು ಕೂದಲು ಹಿಂದಕ್ಕೆ ಬಾಚಿಕೊಂಡು, ನಡೆಯುವಾಗ ಕೊಂಚ ವಾಲುವ ಐದು ಅಡಿಯ ಈ ವ್ಯಕ್ತಿ ಆನಂದ'ನನ್ನು ನಿಷ್ಕಲ್ಮಶ ಮನಸ್ಸಿನಿಂದ ಆರೈಕೆ ಮಾಡುತ್ತಾಳೆ. ನಮ್ಮ ಇಂದಿನ ಸಮಕಾಲೀನ ಸಮಾಜದಲ್ಲಿ ಈ ತರಹದ ಬಹಳ ಮಹಿಳೆಯರನ್ನು ನಾವು ಕಾಣುತ್ತೇವೆ. 'ಮಾಧುರಿ' ಕಥೆಯ ಮಾಧುರಿ, ಬಂದಾವೋ ಬಂದಾವೋ ಕಥೆಯ ಮರಾಠಿಹುಡುಗಿ ಭಾರತಿ, ಸಂಪರ್ಕ ಕಥೆಯ – ರಾಧಿಕಾ, 'ಲಗ್ಗೆ'ಯ ರೇವತಿ ಇತ್ಯಾದಿ ಹೆಣ್ಣುಮಕ್ಕಳು ತಮ್ಮ ನಿಗೂಢ ವ್ಯಕ್ತಿತ್ವದಿಂದ ಅಸ್ಪಷ್ಟವಾಗುತ್ತಾರೆ.

'ಒಕ್ಕಣಿಕೆ' ಕಥೆಯಲ್ಲಿನ ವಾಸಂತಿ, ತನ್ನ ತಂದೆ–ತಾಯಿಯವರ ಸಾವಿನ ನಂತರ ಅಪಾರವಾದ ವಿಷಾದವನ್ನು ಒಳಗಿಟ್ಟುಕೊಂಡು ಹೊರಗಿನ ಸುಖವನ್ನು ಅರ್ಥಮಾಡಿಕೊಳ್ಳಲಾರದೆ ತೊಳಲಾಡುತ್ತಾಳೆ.

'ಲಂಗರು' – ಕಥಾಸಂಕಲನದ ಒಂದು ಕಥೆ – 'ನಮ್ಮ ಪಾಡಿಗೆ ನಾವು' ಈ ಕಥೆಯಲ್ಲಿನ 'ಬಾಯಕ್ಕ'ನ ಪರಿಸ್ಥಿತಿ ಬಹಳ ವಿಚಿತ್ರವಾದುದು. ತನಗೇ ನೂರಾರು ಒತ್ತಡಗಳಿದ್ದರೂ . . . ಊರ ಜನರ ಉಸಾಬರಿಯನ್ನೆಲ್ಲಾ ತಲೆಗೆ ಕಟ್ಟಿಕೊಂಡು – ಅವರಿಗೆ ಸಹಾಯ ಮಾಡುವ ತವಕದ ಮಹಿಳೆ ಬಾಯಕ್ಕ. ಕೆಲವರಿಗೆ ಇದು ಅತಿಯಾಗಿ ಕಾಣುತ್ತದೆ. ತನ್ನ ನೆರೆಮನೆಯ ಕಮಲಕ್ಕನಿಗೆ ಸೊಸೆ ಲಲಿತೆ 'ನೈಟಿ'ಯನ್ನು ತೊಡಿಸಿದಾಗ . . . 'ಅಯ್ಯೋ ನಾ ಬೇಕಾದರೆ ಆಕೆಗೆ ಸೀರೆ ಉಡಿಸುತ್ತೇನೆ' ಎಂದು ಅವರ ಕುಟುಂಬದಲ್ಲಿ ತಲೆಹಾಕಿ, ಚಿಕ್ಕವಯಸ್ಸಿನ ಲಲಿತೆಯಿಂದ ತಾತ್ಸಾರಕ್ಕೆ ಒಳಗಾಗುತ್ತಾಳೆ. ಆದರೂ ಬಾಯಕ್ಕ ಸುಮ್ಮನಿರುವುದಿಲ್ಲ. ವಯಸ್ಸಾದವರಿಗೆ ಚಿಕ್ಕವರು ಸರಿಯಾದ ಪ್ರೀತಿ, ಗೌರವ ಕೊಡಬೇಕೆನ್ನುವುದು ಬಾಯಕ್ಕನ ಅಭಿಪ್ರಾಯ.

ಬಾಯಕ್ಕ ಮದುವೆಯಾಗಿ ಹೆರವಟ್ಟೆಗೆ (ಊರು) ಬಂದಾಗ ಅವಳಿಗೆ ಹದಿನೈದು ವರ್ಷ. ಗಂಡ ವೆಂಕಟೇಶ ಒಳ್ಳೆಯ ಮನುಷ್ಯ. "ಶ್ರೀಪತಿ' ಜನಿಸಿದ ಕೆಲವೇ ವರ್ಷಗಳಲ್ಲಿ ವೆಂಕಟೇಶ ಹಠಾತ್ತನೆ ಸತ್ತುಹೋಗುತ್ತಾನೆ.

'ಮನೆತನ ಮನೆತನ ಎಂದು ಹಲುಬುತ್ತಿದ್ದ ಮಾವನ ಮಾತುಗಳು ನೆನಪಾಗಿ ತನ್ನ ಮೇಲೆ ವಿಚಿತ್ರವಾದ ಜವಾಬ್ದಾರಿಯೊಂದು ಬಿದ್ದಂತೆ ಅನಿಸುತ್ತಿತ್ತು' – ಬಾಯಕ್ಕ.

ಇದರಿಂದ ತಮ್ಮ ಬಂಧು, 'ಈ ಮನೆಯಲ್ಲಿ ಮಗವನ್ನಿಟ್ಟುಕೊಂಡು ಯಾಕೆ ಒಬ್ಬಳೇ ಇರುತ್ತೀ' ಎಂದು ಕರೆದರೂ ಹೋಗುವುದಿಲ್ಲ.

'ಹೆರವಟ್ಟೆ'ಯ ಎಲ್ಲಾ ಜನರ ಬಗ್ಗೆಯೂ ಅವಳಿಗೆ ಗೊತ್ತಿರುತ್ತದೆ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲರಿಗೂ ಅವಳು ಸಹಾಯ ಮಾಡುತ್ತಿರುತ್ತಾಳೆ.

ಪೋಲೀಸರು ವಿನಾಕಾರಣ ಹಾಲಿನ ರಂಗಪ್ಪನವನ್ನು ಸ್ಟೇಷನ್ನಿಗೆ ಕರೆದೊಯ್ದು ಕೂಡಿಹಾಕಿದಾಗ ಈಕೆಯೇ ಹೋಗಿ ಬಿಡಿಸಿಕೊಂಡು ಬರುತ್ತಾಳೆ. ಊರಿನಲ್ಲಿ ಯಾರ ಮನೆಯಲ್ಲಿ ಹಪ್ಪಳ ಮಾಡಿದರೂ ಅಲ್ಲಿ ಬಾಯಕ್ಕ ಇರಲೇಬೇಕು. ತನ್ನ ಊರಿಗೆ ಡಾಂಬರು ರಸ್ತೆ ಬರಲು ಈ ಮಹಿಳೆ ಕಾರಣಳಾಗುತ್ತಾಳೆಂದರೆ . . . ಅವಳ ಶಕ್ತಿ, ಪ್ರಭಾವ ಎಂತಹದಿರಬಹುದು?

ಮಗ ಮುಂಬಯಿಯಲ್ಲಿ ನೌಕರಿ ಮಾಡುವ ಹುಡುಗಿ ಬೇಕೆಂದಾಗ, ಅವರಿವರ ಕಾಲು ಹಿಡಿದು, ಅವನಿಗೆ ಅಲ್ಲಿಯ ಹುಡುಗಿಯನ್ನೇ ಗೊತ್ತು ಮಾಡಿ ಮದುವೆ ಮಾಡಿಸುತ್ತಾಳೆ.

ಕಾಶೀಯಾತ್ರೆಗೆ ಹೋದಾಗ 'ಹಾಗಲಕಾಯಿ' ತಿನ್ನುವುದನ್ನು ಬಿಟ್ಟು ಬರುವ ಬಾಯಕ್ಕ . . . ಹಿತ್ತಲಲ್ಲಿ ಹಾಗಲಕಾಯಿ ಬೆಳೆಯುವುದನ್ನು ನಿಲ್ಲಿಸದೇ . . . ಬೆಳೆದು ಅವರಿವರಿಗೆ ಹಂಚುತ್ತಾಳೆ.

ಮಗನ ಮದುವೆಯಾದ ಹತ್ತು ವರ್ಷಗಳ ತರುವಾಯ ಮುಂಬೈಗೆ ಹೋಗುತ್ತಾಳೆ ಬಾಯಕ್ಕ. ಶ್ರೀಪತಿಯ ಮನೆಯಲ್ಲಿ 'ಎಲ್ಲವೂ ಮುಚ್ಚಿದ ಬಾಗಿಲುಗಳ ಹಿಂದೆ' ಹೊರಗೆ ಹೋಗಿ ಬರುವುದಕ್ಕೆ ಹೊರತು ಮುಂಬಾಗಿಲನ್ನು ತೆರೆಯುತ್ತಲೇ ಇರಲಿಲ್ಲ. ಮೊಮ್ಮಗಳು ರಶ್ಮಿಯ ಜೊತೆ ಸರಿಯಾಗಿ ಮಾತನಾಡಲೂ ಸಹ ಆಗುವುದಿಲ್ಲ.

ಮರಳಿ ತನ್ನ ಊರಿಗೆ ಬರುವ ಬಾಯಕ್ಕ, ನೆರೆಮನೆಯ ಕಮಲಕ್ಕಳ ಸಮಸ್ಯೆಗೆ ಕೈಹಾಕಿ ಅಲ್ಲಿ ಸೋಲನ್ನು ಅನುಭವಿಸಬೇಕಾಗುತ್ತದೆ.

ಹಳ್ಳಿಯ ಬದುಕಿನ ಬೇಗುದಿ, ಅಸಹಾಯಕತೆಯನ್ನು, ಹಿರಿಯರ ಮೂದಲಿಕೆ ಹಾಗೂ ನಯವಂಚಕತನದ ನಡುವೆಯೂ ತನ್ನ ಮಾನವೀಯತೆಯನ್ನು ಎಂದೂ ಬಲಿಕೊಡದೆ . . . ಇತರರ ಜೀವನ ಕಾಳಜಿಯನ್ನು ಹಿಗ್ಗಿಸುತ್ತಾ . . . ಇತರರ ಬದುಕನ್ನು ಹೆಚ್ಚು ಸಹ್ಯವಾಗಿಸುತ್ತಾಳೆ. ತನ್ನ 'ಒಂಟಿತನ'ವನ್ನು ಮೀರಿ ಸಮಾಜ ಮುಖಿಯಾಗುತ್ತಾಳೆ.

ಬಹುಶಃ ನಮ್ಮ ಸಮಾಜದಲ್ಲಿ ಇಂತಹ 'ಸ್ತ್ರೀಶಕ್ತಿ'ಯ ಹೆಚ್ಚಿನ ಅಗತ್ಯವಿದೆ. 'ತನ್ನ ಪಾಡಿಗೆ ತಾನು ಇದ್ದರೆ ಸಾಕೆಂಬ' ತತ್ವಕ್ಕೆ ತಿಲಾಂಜಲಿಯಿತ್ತು, ಯಾರೂ ಅಪೇಕ್ಷಿಸದೇ ಇದ್ದಾಗಲೂ, ಮುಂದಾಳತ್ವ ವಹಿಸುವ 'ಬಾಯಕ್ಕ' ಸ್ವಸ್ಥ ಸಮಾಜದ ಅಂತಃಶಕ್ತಿಯಾಗಿ ಪ್ರಜ್ವಲಿಸುತ್ತಾಳೆ.

'ಲಂಗರು' – ಕಥೆಯ ಮಾಲಿನಿ 'ಭೋಳೆ' ಸ್ವಭಾವದ ಗಂಡ ರಘುವೀರನಿಗೆ ಒಂದು ಒಗಟಾಗಿ ಕಾಣುತ್ತಾಳೆ. ಮಾಲಿನಿಯೇನು ಸದಾ ಜಗಳವಾಡುವಂತಹ ಹೆಂಗಸಲ್ಲ. ಆದರೆ, ತನ್ನದು, ತನ್ನ ಮನೆ, ತನ್ನ ಸಂಸಾರದ ವ್ಯಾಮೋಹ ತೀರಾ ಹೆಚ್ಚಾದಾಗ ಸ್ತಿಮಿತ ತಪ್ಪಿದ ಹಾಗೆ ಆಡುತ್ತಾಳೆ ಅನಿಸುತ್ತಿತ್ತು. ಸಮುದ್ರದ ಅಲೆಗಳ ಆಟ ನೋಡುತ್ತಾ, ಸದಾ ಒಂಟಿಯಾಗಿ. . . ಹಡಗಿನಲ್ಲಿ ತಿರುಗಾಡುವ ರಘುವೀರನ ಮನಸ್ಥಿತಿ ಮಾಲಿನಿಗೆ ಅರ್ಥವಾಗುವುದೇ ಇಲ್ಲ. 'ನಿಮಗೇನೂ ಸಾಧಿಸುವ ಛಲವಿಲ್ಲ. ಏನಾದರೂ ಆಗಬೇಕೆನ್ನುವ ಹಟವಿಲ್ಲ' ಎಂದೆಲ್ಲಾ ಆಡಿ ರಘುವೀರನ ತಾಳ್ಮೆಯನ್ನು ಕಳೆಯುತ್ತಿದ್ದಳು. ತನ್ನ ಅಣ್ಣ, ತಂದೆ, ತಾಯಿಗೆ ಅರ್ಥವಾಗದ ತಾನು, ಹೆಂಡತಿಗೂ ಒಗಟಾದೆನಲ್ಲ ಎಂದು ಅನ್ಯಮನಸ್ಕನಾಗುತ್ತಾನೆ ರಘುವೀರ.

ಅಂತಃಪಟ ಕಥೆಯ ಸಿಂಪಿ ಮಹಾದೇವ ತಳಸ್ತರದಿಂದ ಶ್ರಮಪಟ್ಟು ಮೇಲೆ ಬಂದು ನಾಲ್ಕು ಕಾಸು ಕಂಡವನು. ಹೆಚ್ಚಿನ ಮಹತ್ವಾಕಾಂಕ್ಷೆಯಿಂದ ಮುಂಬೈ ನಗರಕ್ಕೆ ಬರುತ್ತಾನೆ. ವಿಭಿನ್ನ ವಿನ್ಯಾಸದ ಬಟ್ಟೆಗಳನ್ನು ಹೊಲಿಯುತ್ತಾ ನಗರದ ಬೆಡಗು, ಬಿನ್ನಾಣಗಳಿಗೆ ಮಾರುಹೋಗುತ್ತಾನೆ. ಬಟ್ಟೆ ಅಳತೆ ನೀಡಲು ಬರುವ 'ರಾಗಿಣಿ'ಯ ನಿಗೂಢ ಚೆಲ್ಲುತನದಿಂದ ಮಹಾದೇವನನ್ನು ಆಕರ್ಷಿಸುತ್ತಾಳೆ. ಅತ್ಯಂತ ನಿಷ್ಪಳಾದ ಹೆಂಡತಿಯ ವ್ಯಕ್ತಿತ್ವ ಅಸಹ್ಯವೆನಿಸತೊಡಗುತ್ತದೆ. ಇದಾವುದರ ಪರಿವೆಯಿಲ್ಲದ ಹೆಂಡತಿ ತನ್ನ ಗಂಡನ ಪರಿಶ್ರಮವನ್ನು ಗೌರವಿಸುತ್ತಾ ಬದುಕು ನಡೆಸುತ್ತಿರುತ್ತಾಳೆ. ರಾಗಿಣಿ ಸಂಗ ಮಾಡಿದ ಮಹಾದೇವ . . . ಆಕೆ ವಿವಾಹಸ್ತ ಮಹಿಳೆ ಎಂದು ತಿಳಿದ ಮೇಲೆ ಅವನ ಉತ್ಸಾಹವೆಲ್ಲಾ ಜಾರಿ . . . ಮನೆಗೆ ಹಿಂತಿರುಗಿ ಹೆಂಡತಿ ಮಾಲಿನಿಯ ಪ್ರೀತಿಗೆ ಹಾತೊರೆಯುತ್ತಾನೆ. ಈ ಒಂದೇ ಕಥೆಯಲ್ಲಿ ಇಬ್ಬರು ಹೆಣ್ಣು ಮಕ್ಕಳು ಕೆಳ ಮಧ್ಯಮ ವರ್ಗದ 'ಜೀವನದ ಹಾದಿಯಲ್ಲಿ' ಒಬ್ಬ ಪುರುಷನನ್ನು ಸಂತೋಷಪಡಿಸಲು ಹೆಣಗುವುದು – ನಗರ ಜೀವನದ ವಿಪರ್ಯಾಸಕ್ಕೆ ಕನ್ನಡಿ ಹಿಡಿದಂತಿದೆ.

'ಮೋಹನ ಮುರಲಿ'ಯ ಸುಶೀಲೆ ತಡವಾಗಿ ತಾಯಿಯಾಗಿ,ಆ ಮಗುವನ್ನು ಕಳೆದುಕೊಂಡು, ಇನ್ನೇನು ತನಗೆ ಮಕ್ಕಳೇ ಆಗುವುದೇ ಇಲ್ಲವೇನೋ ಎಂದು ನಿರಾಶೆಗೊಂಡವಳು. ಆದರೆ, ಮತ್ತೆ ತಾಯಿಯಾಗಿ ನೆಮ್ಮದಿಯಿಂದ ಇರುತ್ತಾಳೆ. ಬೆಳೆಯುತ್ತಾ ಹೋದಂತೆ, 'ದಿನಕರ' (ಮಗ) ಕುಮಟ, ಧಾರವಾಡ ಹೀಗೆ ಓದಿನ ಕುದುರೆಯನ್ನೇರಿ ಹೊರಟವನು ಹೊರಗೇ ಇದ್ದು ಬಿಡುತ್ತಾನೆ. ತಂದೆ ರಾಮರಾಯರ ಯಕ್ಷಗಾನ, ತಾಯಿ ಸುಶೀಲೆಯ ಮಾತೃತ್ವದ ನಿರೀಕ್ಷೆಯ ಸೂಕ್ಷ್ಮತೆಗಳು ಅವನಿಗೆ ಅರ್ಥವಾಗುವುದೇ ಇಲ್ಲ. ಮುಂದೆ ಅವನು ಬ್ಯಾಂಕ್ ಸೇರಿಕೊಂಡಾಗಲಂತೂ ಅವನ ಪ್ರಪಂಚವೇ ಬೇರೆಯಾಗಿ ಬಿಡುತ್ತದೆ. ಅವನ ನೌಕರಿಯೇ ಅವನ ಜೀವನ ಆಗಿಹೋಗುತ್ತದೆ.

'ತನ್ನ ಕಾಲದವರಿಗಿದ್ದ ಧೈರ್ಯವಾಗಲೀ, ಪ್ರೀತಿಯಾಗಲೀ, ಹುಂಬತನವಾಗಲೀ ಆತನಿಗಿಲ್ಲ, ಸುರಳೀತ ದಾರಿಗಳನ್ನೇ ಆರಿಸಿಕೊಳ್ಳುವವನು' – ಪುಟ 106 (ಕಥಾಸಂಕಲನ –ಲಂಗರು).

ದಿನಕರ ನಿರ್ಮಲೆಯನ್ನು ಮದುವೆಯಾಗಿ ಸುಖವಾಗಿರುತ್ತಾನೆ. ಸುಶೀಲೆಗೆ ಮಗ ಸ್ವಲ್ಪ ದಿನವಾದರೂ ತನ್ನೊಡನೆ ಇರಲೆಂಬ ಹಂಬಲ. ಆದರೆ, ಅದು ಆಗುವುದೇ ಇಲ್ಲ. ಪುಟ್ಟ ವಿನುತ ಹುಟ್ಟಿದಾಗಲಂತೂ ಮಗ ಸೊಸೆಗಿಂತ ಹೆಚ್ಚು ಸಂತೋಷ, ಸಂಭ್ರಮ ಪಟ್ಟಾಕೆ ಸುಶೀಲೆ. ತಂದೆಯ ಯಕ್ಷಗಾನದ 'ಹುಚ್ಚು' ಗೊತ್ತಿದ್ದ ದಿನಕರ ಅವರೊಂದಿಗೆ ಭಾವನಾತ್ಮಕವಾಗಿ ವರ್ತಿಸಿದ್ದು, ಬಹಳ ಕಡಿಮೆ.

ತಾಯಿ ಸುಶೀಲೆಯು – ಕೆಲಸ ಮಾಡುವ ಯಂತ್ರವಾಗಿ ಮಾತ್ರ ದಿನಕರನಿಗೆ ಕಾಣಿಸುತ್ತಾಳೆ. ಆದರೆ, ಸುಶೀಲೆಗೆ ಮಗನ ಕುಟುಂಬವೆಂದರೆ ಎಲ್ಲಿಲ್ಲದ ಸಂತೋಷ. ಮಗ ದೂರದಲ್ಲಿ ಮನೆಮಾಡಿ ಸುಶೀಲೆಯನ್ನು ಕರೆಯಲು ಬಂದಾಗ ಸುಶೀಲೆಗೆ ವಿಶೇಷ ಸಂಭ್ರಮ. ಮಗನಿಗಾಗಿ ಪ್ರಿಯವಾದ ತಿಂಡಿಗಳನ್ನು ಮಾಡಿ, ಮೊಮ್ಮಗಳಿಗಾಗಿ ಆಟದ ಗೊಂಬೆಗಳನ್ನು ಸ್ವಚ್ಛ ಮಾಡಿಡುತ್ತಾಳೆ. ತಾನು ಮಗುವಿಗೆಂದು ಹೊಲಿದ ದುಪ್ಪಟ್ಟಿಗಳನ್ನು ಜೋಡಿಸಿಟ್ಟು ಹೊರಡಲು ತಯಾರಾಗುತ್ತಾಳೆ.

ವರ ಬೇಡಿ ಪಡೆದ ಮಗನಿಗೆ ತನ್ನ ಅಗತ್ಯ ಸದಾ ಇರುತ್ತದೆಯೆಂದು ನಂಬುವ ಮುಗ್ಧ ಸುಶೀಲೆಯ ಸ್ಥೈರ್ಯ, ಜೀವನ ಪ್ರೀತಿಗಳನ್ನು ಮೆಚ್ಚಿಕೊಳ್ಳಲೇಬೇಕು.

ಮಗ ತನ್ನ ಅನುಕೂಲಕ್ಕಾಗಿ ತಾಯಿಯ ಮುಗ್ಧ ಪ್ರೀತಿ, ಕಾಳಜಿಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವ ವಿಷಯ ತಂದೆ–ರಾಮರಾಯನಿಗೆ ತಿಳಿಯುತ್ತದೆ. ಆದರೆ, ಸುಶೀಲೆಗೆ ಈ ವಿಷಯ ಹೊಳೆಯುವುದೇ ಇಲ್ಲ. ಮಗ ಓದುವಾಗ, ಗಂಡ

ಹಣಕ್ಕಾಗಿ ಕಷ್ಟಪಟ್ಟಿದ್ದರ ಬಗ್ಗೆ ಸುಶೀಲೆಗೆ ಒಂದು ಕಾಲದಲ್ಲಿ ಅನುಕಂಪವಿತ್ತು. ಆದ್ರೆ, ಅದೆಲ್ಲಾ ಕರ್ತವ್ಯದ ಭಾಗವೆಂದು ತಿಳಿದು ಬಡತನದ ಬೇಗೆಯನ್ನು ಮರೆತು ಬಿಟ್ಟಿರುತ್ತಾಳೆ.

'ಹುಲಿಸವಾರಿ' ಕಥಾಸಂಕಲನದಲ್ಲಿನ 'ಕಂತು' ಕಥೆ ವಿವೇಕ ಶಾನಭಾಗರ ಮಹತ್ವಾಕಾಂಕ್ಷೆಯ ರಚನೆ. ಮಾವಿನೂರಿನಲ್ಲಿ 'ಗ್ರಹಣ'ದ ಗಾಳಿ ಜೋರಾಗಿ ಬೀಸುತ್ತಿರುತ್ತದೆ. ಊರಿನ ವಿಜ್ಞಾನ ಮಾಸ್ತರು ಸದಾನಂದರಿಗೆ ಹಳ್ಳಿಯ ವಿದ್ಯಾರ್ಥಿ ಗಳಲ್ಲಿ, ಜನಸಮಾನ್ಯರಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ಬೆಳೆಸುವ ಉಮೇದು, ಅವರ ಪತ್ನಿ ಸರಸ್ವತಿ. ಸರಸ್ವತಿಯನ್ನು ಮದುವೆಯಾದ ಸ್ವಲ್ಪ ದಿನದಲ್ಲೇ ಅವಳ ವಿಚಿತ್ರ ಪ್ರಕೃತಿ ಲಕ್ಷ್ಯಕ್ಕೆ ಬರತೊಡಗುತ್ತದೆ. ಅವಳಿಗೆ ಆಗಾಗ ಬುದ್ಧಿ ಸ್ವಲ್ಪ ಸಿಮಿತ ತಪ್ಪುತ್ತಿತ್ತು. ವಿಜ್ಞಾನ ವಿಷಯದ ಮೇಸ್ತ್ರು ಸದಾನಂದರು ಹೆಂಡತಿಗೆ ಸರಿಯಾದ ಚಿಕಿತ್ಸೆ ಕೊಡಿಸದಿರುವುದು ಅರ್ಥವಾಗುವುದೇ ಇಲ್ಲ. 'ಗ್ರಹಣ'ದ ಹೆಸರಿನಲ್ಲಿ ಊರವರ ಹಾದಿ ತಪ್ಪಿಸುವ ಶಕ್ತಿಯನ್ನು ಎದುರು ಹಾಕಿಕೊಳ್ಳುವ  ಸದಾನಂದ ಮಾಸ್ತರು, ಹೆಂಡತಿಯನ್ನು ಸರಿಪಡಿಸಲು ಗೋಕರ್ಣಕ್ಕೆ ಹೋಗಿ ಹೆಂಡತಿಯ ಜಾತಕ ತೋರಿಸುತ್ತಾರೆ ಅವರು ಪ್ರಕಾಂಡ ಜ್ಯೋತಿಷಿಗಳೆಂದು ಹೆಸರಾದವರು. 'ನಿಮ್ಮ ಹೆಂಡತಿಗೆ ಇಪ್ಪತ್ತೊಂದು ವರ್ಷದ ಶನಿ, ಈಗ ಒಂದು ವರ್ಷದ ಹಿಂದೆ ಹಿಡಿದಿದೆ, ಅದರ ಉಗ್ರತೆ ಕಡಿಮೆಯಾಗುವ ಹಾಗೆ ಶನಿಯ ಉಪಾಸನೆ ಮಾಡಿ ಅಷ್ಟೇ' ಎಂದು ಹೇಳುತ್ತಾರೆ.

ಕಾಗೆಯ ಮೇಲೆ ಕುಳಿತ ಶನಿದೇವರ ಚಿತ್ರವುಳ್ಳ ಮುಖಪುಟದ ಶನಿಮಹಾತ್ಮೆ ಪುಸ್ತಕವನ್ನು ಮಾಸ್ತರರು ಪ್ರತಿ ದಿನ ಓದಲಾರಂಬಿಸುತ್ತಾರೆ. 'ಸರಸ್ವತಿ' ಪ್ರತಿಯೊಬ್ಬ ಊರಿನವರಿಗೂ ವಿಚಿತ್ರವಾಗಿ ಕಾಣಿಸುತ್ತಾಳೆ. ಗ್ರಹಣದ ದಿನವೇ ಸದಾನಂದ ಮಾಸ್ತರು ಹೆಂಡತಿಯ ತವರು ಮನೆಗೆ 'ಶನಿ ಶಾಂತಿ' ಪೂಜೆಗೆ ತೆರಳುವುದು ವಿಪರ್ಯಾಸವೆನಿಸುತ್ತದೆ.

ಗಂಡನ ಲೆಕ್ಕಗಳನ್ನು ಬರೆದಿಡುವ ಅಭ್ಯಾಸದ ಬಗ್ಗೆ ಸ್ವಲ್ಪವೂ ಬೇಸರಿಸಿಕೊಳ್ಳದ ಸ್ತ್ರೀ–ವಾರಿಣಿ. 'ಸಶೇಷ' ಕಥೆಯ ಮಲ್ಟಿನ್ಯಾಷನಲ್ ಕಂಪನಿಯೊಂದರಲ್ಲಿ ಕೆಲಸ ಮಾಡುವ ನಂಬಿಯಾರ್‌ನ ಹೆಂಡತಿ. ಮಹತ್ವಾಕಾಂಕ್ಷಿ ನಂಬಿಯಾರ್ ಎಷ್ಟೊಂದು ಕೆಲಸ ಮಾಡುತ್ತಿದ್ದ ಅಂದರೆ, ಮಲಗಲು ಮಾತ್ರ ಮನೆಗೆ ಬರುತ್ತಿದ್ದ. ಅವನ ಹೆಂಡತಿ ವಾರಿಣಿ ಇದನ್ನೆಲ್ಲಾ ಸಹಿಸಿಕೊಂಡು, ಇಂತಹ ವಿಷಯಗಳನ್ನೆಲ್ಲಾ ಗಂಡನ ಸಹೋದ್ಯೋಗಿಗಳ ಹೆಂಡತಿಯರು ಸಿಕ್ಕಾಗ ಅವರ ಜೊತೆ ಚರ್ಚಿಸದೇ, ಎಲ್ಲರಿಗೂ ಇವರ ಸುಖೀ ದಾಂಪತ್ಯದ ಬಗ್ಗೆ ಹೊಟ್ಟೆಕಿಚ್ಚಾಗುವಂತೆ ಮಾಡುತ್ತಿದ್ದಳು.

'ಹನ್ನೆರೆಡು ರೂಪಾಯಿ' ಆಯವ್ಯಯದಲ್ಲಿ ವ್ಯತ್ಯಾಸವಾಗುತ್ತದೆ. ಪ್ರಪಂಚವೇ ತಲೆ ಮೇಲೆ ಬಿದ್ದಂತಾಗುತ್ತಾನೆ ನಂಬಿಯಾರ್. ಗಂಡನ ಈ ಮನಸ್ಥಿತಿ ವಾರಿಣಿಯ ದುಗುಡವನ್ನು ಹೆಚ್ಚಿಸುತ್ತದೆ. ನಂಬಿಯಾರ್‌ನ ಗೆಳೆಯ ಪ್ರವೀಣ್ ಈ ದಂಪತಿಗಳಿಗೆ ಬುದ್ಧಿವಾದ ಹೇಳಿದ ಮೇಲೆ . . . ಇವರಲ್ಲಿ ಬದಲಾವಣೆ ಕಾಣತೊಡಗುತ್ತದೆ.

ವಾರಿಣಿ, ಸುಲಭವಾಗಿ ಗಂಡನನ್ನು ದಾರಿಗೆ ತರಬಹುದಿತ್ತು. ಆದರೆ, ಹಲವಾರು ವರ್ಷಗಳಿಂದ ಗಂಡನ ಮನೆತನದವರು ಪಾಲಿಸಿಕೊಂಡು ಬಂದಿರುವ ಈ 'ಚಿತ್ರಗುಪ್ತ' ಪದ್ಧತಿಯನ್ನು ಉಡಾಫೆ ಮಾಡದೇ ಸ್ವೀಕರಿಸುವುದು ಆಕೆಯ ಸಮಾಧಾನ ಚಿತ್ತ ಮನಸ್ಥಿತಿಯನ್ನು ಪ್ರಸ್ತುತ ಪಡಿಸುತ್ತದೆ.

ಯಶಸ್ವಿ ಪುರುಷರ ಹೆಂಡತಿಯರು ಮಾನಸಿಕವಾಗಿ ಎಷ್ಟು ನೆಮ್ಮದಿಯಿಂದ ಇರುತ್ತಾರೆ? ವಿವೇಕ ಶಾನಭಾಗರ 'ಹುಲಿ ಸವಾರಿ' ಕಥಾಸಂಕಲನದ ಒಂದು ಕಥೆ – 'ಪ್ರತ್ಯಕ್ಷ'.



ಗೌಹಾಟಿಗೆ ಕೆಲಸದ ಮೇಲೆ ಬರುತ್ತಾನೆ ಭಗ್ನಪ್ರೇಮಿ ದೀಪಕ್. ದೊಡ್ಡ ಕಂಪನಿಯೊಂದರ ಮಾಲೀಕ ಕುಮಾರ್, ಅವರ ಪತ್ನಿ ರೇಖಾ. ರೇಖಾ ದೀಪಕನಿಂದ ಆಕರ್ಷಣೆಗೆ ಒಳಗಾಗುತ್ತಾಳೆಂದು ಅನಿಸುವಷ್ಟರಲ್ಲಿ . . . ಅದು ದೀಪಕನ ಭ್ರಮೆಯೆಂಬುದು ನಮಗೆ ನಂತರ ತಿಳಿದುಬರುತ್ತದೆ.

ದೀಪಕನಿಗೆ ಪರಿಚಿತನಾದ 'ದಲ್ಲಾಳಿ' ವ್ಯಕ್ತಿತ್ವದ ಕೌಶಿಕ್ – ದೀಪಕ್‌ನನ್ನು ವಿನಯಚಂದ್ರನಿಗೆ ಪರಿಚಯಿಸುತ್ತಾನೆ. ವಿನಯಚಂದ್ರ, ಕೌಶಿಕ್ ಕೆಲಸ ಮಾಡುತ್ತಿರುವ ಕಂಪನಿಯ ಮಾಲೀಕ. ಅವನ ಹೆಂಡತಿ ಸವಿತಾ. ಮಹತ್ವಾಕಾಂಕ್ಷಿ ಕಂಪನಿಯನ್ನು ತಾನು ನಡೆಸಬೇಕೆಂಬ ಹಂಬಲ. ಆದರೆ ಗಂಡ ವಿನಯಚಂದ್ರನಿಗೆ ಅದು ಇಷ್ಟವಿಲ್ಲ. ಹಣ, ಐಶ್ವರ್ಯ, ಅಂತಸ್ತು ಎಲ್ಲಾ ಇದ್ದರೂ ರೇಖಾ ಸವಿತಾ ಮಾನಸಿಕವಾಗಿ ಸಂತೃಪ್ತರಾಗಿಲ್ಲ. ಆದರೂ ಅವರು ತಮ್ಮ ಜೀವನ ಪ್ರೀತಿಯನ್ನು ಕಳೆದುಕೊಳ್ಳುವುದಿಲ್ಲ.

ವಿವೇಕರ 'ಮತ್ತೊಬ್ಬರ ಸಂಸಾರ', 'ಘಾಚರ್ ಘೋಚರ್' ಕಥಾಸಂಕಲನ ಗಳಲ್ಲೂ ಅನೇಕ ಶಕ್ತಿಶಾಲಿ ಸ್ತ್ರೀ ಪಾತ್ರಗಳಿವೆ. ಬದುಕನ್ನು ದಿಟ್ಟವಾಗಿ ಎದುರಿಸುವ ಲಾವಣ್ಯ (ಮತ್ತೊಬ್ಬನ ಸಂಸಾರ), ತತ್ವಗಳ ಸಂಘರ್ಷದಲ್ಲಿ ಮೌನದಿ ನಲುಗುವ ಅರ್ಚನಾ (ಕೆಲವುತತ್ವಗಳ ಸಲುವಾಗಿ), ನಿಗೂಢ ವ್ಯಕ್ತಿತ್ವದ ಸುಂದರಿ (ಸರಹದ್ದು), ಊರ ಜನರ ನರವ್ಯಾಧಿಯನ್ನು ಹೋಗಲಾಡಿಸುವ ಸುಶೀಲೆ (ಕಾಂಟಾಸಮ್ಮಿತ), ಮಹಿಮಯ್ಯನ 'ಮತ್ತೊಬ್ಬ ಹೆಣ್ಣು' ರಾಮಿ (ಮಂಡಲ), ಮದುವೆಯಾಗದೆ ಬಸಿರಾಗುವ, ಮಗುವಿನ ತಂದೆಯ ಬಗ್ಗೆ ಯಾರ ಮುಂದೆಯೂ ಬಾಯಿಬಿಡದ ಚಂದ್ರಿಕಾ (ಮಂಡಲ), ಯಾವುದೇ ಅವ್ಯಕ್ತ ಅನುಭವವನ್ನು ಅನುಭವಿಸಿದಂತೆ ಕಂಡರೂ, ಯಾರಿಗೂ ಹೇಳದ

ವಸುಂಧರಾ (ಥೂ ಕೃಷ್ಣ), ಎಲ್ಲದರಲ್ಲೂ ನಾನೇ ಸರಿ ಎಂದು ವಾದಿಸುವ ಮಾಲತಿ (ಫಾಚರ್ ಫೋಚರ್), ನಿರೂಪಕನ ಹೆಂಡತಿ ಗಟ್ಟಿ ವ್ಯಕ್ತಿತ್ವದ ಅನಿತಾ (ಫಾಚರ್ ಫೋಚರ್) ಸೊಸೆಯೊಂದಿಗೆ ಸದಾ ಮನಸ್ತಾಪದಲ್ಲಿರುವ ಅತ್ತೆ ಸರೋಜಿನಿ (ಸುಧೀರನ ತಾಯಿ), ಗಂಡ ತನ್ನ ಬಗೆಗೆ ಹೇಳಿದ ಸತ್ಯದಿಂದ ಸ್ವಲ್ಪವೂ ವಿಚಲಿತಳಾಗದೆ ತನ್ನ ಅಭಿಪ್ರಾಯವನ್ನು ತಿಳಿಸಿ, ಗಂಡನನ್ನು ತೊರೆದು ಹೋಗುವ ಸೀಮಾ (ವಿಚಿತ್ರ ಕಥೆ) ಇತ್ಯಾದಿ. ಸ್ತ್ರೀ ಪಾತ್ರಗಳೂ ತಮ್ಮ ತನವನ್ನು ಎಂದೂ ಕಳೆದುಕೊಳ್ಳದೇ ಕೊನೆಯವರೆಗೂ ತಮ್ಮ ಅಸ್ಮಿತಿಗಾಗಿ ಹೋರಾಡುತ್ತವೆ.

ತನ್ನ ಬಗ್ಗೆ ಉಳಿದವರ ಅನಾದರ ತೀವ್ರವಾದಾಗ ಸಿಡಿದೇಳುವ ಈ ಪಾತ್ರಗಳು ನಮ್ಮ ಬಂಡಾಯವೂ ನಮ್ಮ ಜೀವನ ಪ್ರೀತಿಯ ಒಂದು ಮುಖ್ಯ ಭಾಗವೆಂಬುದನ್ನು ಸ್ಪಷ್ಟಪಡಿಸುತ್ತದೆ. ಮೊದ ಮೊದಲು ತಮಗೆ ಒದಗಿ ಬಂದ ಅವಸ್ಥೆಯನ್ನು ಒಪ್ಪಿಕೊಂಡಂತೆ ಕಂಡರೂ, ಅದನ್ನು ಜೀವನಪೂರ್ತಿ ಸಹಿಸುವುದಿಲ್ಲ.

ಭಾವನಾತ್ಮಕವಾಗಿ ಸಾಧ್ಯವಾಗದೆ ಇರುವುದನ್ನು ವ್ಯಾವಹಾರಿಕ ಜಾಣ್ಮೆಯ ಮೂಲಕ ಸಾಧ್ಯವಾಗಿಸಲು ಪ್ರಯತ್ನಿಸುವ ವಿವೇಕ ಶಾನಭಾಗರ ಸ್ತ್ರೀ ಪಾತ್ರಗಳು – ಸದಾ ಚೈತನ್ಯದ ಚಿಲುಮೆಗಳಾಗಿಯೇ ಕಂಡುಬರುತ್ತವೆ.

ಯಾವುದೇ ಒಂದು ನಿರ್ಧಿಷ್ಟವಾದ ಚಳುವಳಿ ಅಥವಾ ಗುಂಪಿನೊಂದಿಗೆ ತಮ್ಮ ಬರವಣಿಗೆಯನ್ನು ಗುರುತಿಸಿಕೊಳ್ಳದ ವಿವೇಕ ಶಾನಭಾಗರ ಸಣ್ಣ ಕಥಾಲೋಕ ಅನೇಕ ಯುವ ಕಥಾ ಲೇಖಕರಿಗೆ ಸ್ಪೂರ್ತಿಯಾಗಿದೆ. ಮನುಷ್ಯ ಜೀವನವು ತಾನು ಕಂಡುಂಡ ನೋವು, ನಲಿವುಗಳಿಗೆ ಸಕಾರಾತ್ಮಕವಾಗಿ ಸ್ಪಂಧಿಸುವ ಶಕ್ತಿಯನ್ನು ಅವರ ಕಥೆಗಳು ನೀಡುತ್ತವೆ. ಬಹುಶಃ ಒಬ್ಬ ಜೀವಂತ ಕಥೆಗಾರರಾಗಿ ವಿವೇಕ ಶಾನಭಾಗರ ಸಾಮಾಜಿಕ ಜವಾಬ್ದಾರಿ ಅತ್ಯಂತ ಸಮರ್ಥವಾಗಿ ಅವರ ಸಾಹಿತ್ಯದಲ್ಲಿ ಹೊರಹೊಮ್ಮಿದೆ ಎಂದರೆ ತಪ್ಪಾಗಲಾರದೇನೋ.

# ಸಮಾರೋಪ

ಸಾರಾಲೇಖದಲ್ಲಿ ಮೊದಲೇ ತಿಳಿಸಿದಂತೆ ಈ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಪರಿವಿಡಿ, ಏಳು ಅಧ್ಯಾಯಗಳು, ಸಮಾರೋಪ, ಆಕರ ಪಠ್ಯಗಳು ಮತ್ತು ಪರಾಮರ್ಶನ ಗ್ರಂಥಗಳ ಪಟ್ಟಿ, ಇತ್ಯಾದಿ ಎಲ್ಲಾ ವಿಷಯಗಳನ್ನು ವಿವರವಾಗಿ ನೀಡಲಾಗಿದೆ. ವಿವೇಕ ಶಾನಭಾಗರ ಐದು ಕಥಾಸಂಕಲನಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಭಾಗಿಸಿಕೊಂಡ ವರ್ಗೀಕರಣದ ಅಡಿಯಲ್ಲಿ ಅವರ ಒಟ್ಟು ಮೂವತ್ತೇಳು ಕಥೆಗಳನ್ನು ವಿಮರ್ಶಾತ್ಮಕವಾಗಿ ಅಭ್ಯಾಸ ಮಾಡಲಾಗಿದೆ.

ಈ ಅಧ್ಯಯನದ ಮೂಲಕ ಆಧುನಿಕ ಸಣ್ಣ ಕಥಾಲೋಕದಲ್ಲಿ ವಿವೇಕ ಶಾನಭಾಗರ ವಿಶೇಷ ಸ್ಥಾನವನ್ನು ಗುರುತಿಸಲಾಗಿದೆ. ಇಂದು ಬರೆಯುವವರ ಸಂಖ್ಯೆ ಹೆಚ್ಚಾಗಿದೆ. ಕನ್ನಡ ಶಿಕ್ಷಕರು ಹಾಗೂ ಪ್ರಾಧ್ಯಾಪಕರುಗಳು ಮಾತ್ರ ಸಾಹಿತ್ಯ ರಚನೆ ಮಾಡುತ್ತಿದ್ದ ಕಾಲ ಒಂದಿತ್ತು. ಆದರೆ, ಈಗ ಕಾಲ ಬದಲಾಗಿದೆ. ವಿಭಿನ್ನ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರು ಸೃಜನಶೀಲ ಬರವಣಿಗೆಯನ್ನು ಗಂಭೀರವಾಗಿ ಸ್ವೀಕರಿಸಿ, ಜನಸಾಮಾನ್ಯರು ನೋಡದ ಜಗತ್ತನ್ನು ಬರವಣಿಗೆಯ ಮೂಲಕ ತೆರೆದಿಡುತ್ತಿದ್ದಾರೆ.

ವೃತ್ತಿಯಲ್ಲಿ ಇಂಜಿನಿಯರ್ ಆಗಿರುವ ವಿವೇಕ ಶಾನಭಾಗರು ತಮ್ಮ ಸೂಕ್ಷ್ಮ ಗ್ರಹಿಕೆ, ಸಮಕಾಲೀನ ಸ್ಥಿತ್ಯಂತರಗಳಿಗೆ ಸ್ಪಂಧಿಸುವ ಕಥನ ಶೈಲಿಗಳ ಮೂಲಕ ನಮ್ಮ ನಡುವಿನ ಮಹತ್ವದ ಲೇಖಕರಲ್ಲಿ ಒಬ್ಬರೆನಿಸಿಕೊಂಡಿದ್ದಾರೆ. ಅವರ ಕಥೆಗಳಲ್ಲಿನ ಮಾನವೀಯ ಕಳಕಳಿ, ಜಾಗತೀಕರಣದ ಪರಿಣಾಮಗಳ ಬಗೆಗಿನ ಆತಂಕ, ಸ್ತ್ರೀ ವ್ಯಕ್ತಿತ್ವಕ್ಕೆ ಮರುಗುವ, ಗಟ್ಟಿತನಕ್ಕೆ ತಲೆದೂಗುವ, ಸಾಮಾಜಿಕ ಸಂಘರ್ಷಕ್ಕೆ ಮುಖಾಮುಖಿಯಾಗುವ ಸಂಕಷ್ಟಗಳ ಸಮಯದಲ್ಲಿ ಸಂಯಮದಿಂದ ನಡೆದುಕೊಳ್ಳುವ ಆಕ್ರಮಣಶೀಲತೆಯಿಂದ ದೂರವಿರುವ ಸಮಷ್ಠಿ ಪ್ರಜ್ಞೆಯನ್ನು ಮೆರೆಯುವ ಅಂಶಗಳು ಕಥೆಗಾರನ ಭವಿಷ್ಯದ ಬಗೆಗಿನ ಆಶಾದಾಯಕ ನಿಲುವನ್ನು ಅರ್ಥಮಾಡಿಕೊಳ್ಳಲು ಸಹಕರಿಸುತ್ತವೆ.

ಈ ಸಂಪ್ರಬಂಧದಲ್ಲಿ ಒಟ್ಟಾರೆಯಾಗಿ ವಿವೇಕ ಶಾನಭಾಗರ ಮೂವತ್ತೇಳು ಕಥೆಗಳನ್ನು, ಅವುಗಳು ಪ್ರತಿಪಾಧಿಸುವ ಜೀವನ ದರ್ಶನದ ಹಿನ್ನೆಲೆಯಲ್ಲಿ ವಿಮರ್ಶಾತ್ಮಕವಾಗಿ ಈ ಕೆಳಕಂಡಂತೆ ಅಭ್ಯಾಸ ಮಾಡಲಾಗಿದೆ.

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ :

ಭಾರತದಲ್ಲಿ ಮಾತ್ರವಲ್ಲ, ಪ್ರಪಂಚದಲ್ಲಿರುವ ಯಾವುದೇ ಪತ್ರಿಕೆಗಳನ್ನು ನೋಡಿದರೂ, ಕಥಾಮಯವಾಗಿರುವುದನ್ನು ಕಾಣಬಹುದು. ಸಣ್ಣಕಥೆ, ನೀಳ್ಗಥೆ, ಕಿರುಕಥೆ, ಧಾರಾವಾಹಿ ಕಥೆ, ಹೀಗೆ ಕಥೆಗಳನ್ನು ಪ್ರಕಟಿಸುವುದರಲ್ಲಿ ಪತ್ರಿಕೆಗಳು ಪ್ರಮುಖ ಪಾತ್ರವನ್ನು ವಹಿಸುವುದನ್ನು ಕಾಣಬಹುದು.

ಕಥೆಗಳ ಕಣಜವಾದ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕಥೆ ಹೇಳುವ, ಕೇಳುವ ವಾಡಿಕೆಯಿಂದಾಗಿ, ವಿಪುಲವಾದ ಕಥಾ ಸಾಹಿತ್ಯ ಸೃಷ್ಟಿಯಾಗಿದೆ. ಸಾಹಿತ್ಯದ ಸ್ಥಾನಮಾನ ಅತ್ಯಂತ ಮಹತ್ವದ್ದಾಗಿದೆ. ಆ ಬಗ್ಗೆ ಜಿಜ್ಞಾಸೆ ಅನಗತ್ಯ. ಉತ್ತಮ ಸಮಾಜ ಪರ ಸಾಹಿತ್ಯವನ್ನು ಸೃಷ್ಟಿಸಿದ ಸಾಹಿತಿಯೇ ಹೆಚ್ಚಿನ ಮಹತ್ವದ ವ್ಯಕ್ತಿಯಾಗುವುದು ಸಹಜವೇ ಆಗಿದೆ.

ವೃತ್ತಿ ಹಾಗೂ ಪ್ರವೃತ್ತಿ ಎರಡೂ ಭಿನ್ನವಾಗಿರುವ ಕಾರಣ ವಿವೇಕ ಶಾನಭಾಗರ ಬರವಣಿಗೆ ತನ್ನದೇ ಆದ ವಿಶೇಷತೆಗಳಿಂದ ಕೂಡಿದೆ. ಇವರ ಐದು ಕಥಾ ಸಂಕಲನಗಳು ವಿಭಿನ್ನ ಕಾಲಘಟ್ಟದಲ್ಲಿ ರಚನೆಗೊಂಡಿವೆ. ಇವರ ಮೊದಲ ಸಣ್ಣ ಕಥಾಸಂಕಲನ 'ಅಂಕುರ' 1985 ರಲ್ಲಿ ಪ್ರಕಟವಾಯಿತು. ವಯೋ ಸಹಜ ಕುತೂಹಲ, ಅಸ್ಪಷ್ಟಗಳು ಮನೆ ಮಾಡಿರುವ ಮನಸ್ಸು, ಪರಸ್ತ್ರೀ ಬಗ್ಗೆ ಕೌತುಕದಿಂದ ಆಲೋಚಿಸುವ ಕಥೆಗಳು, ಈ ಕಥಾಸಂಕಲನದಲ್ಲಿವೆ. ನವ್ಯ ಸಾಹಿತ್ಯದ ಪ್ರಭಾವಳಿ ಈ ಕಥಾ ಸಂಕಲನದಲ್ಲಿ ಎದ್ದು ಕಾಣುತ್ತದೆ. ಈ ಕಥಾ ಸಂಕಲನದಲ್ಲಿ ಒಟ್ಟು ಆರು ಕಥೆಗಳಿವೆ.

ಹತ್ತು ಕಥೆಗಳನ್ನು ಹೊಂದಿರುವ 'ಲಂಗರು' ಕಥಾ ಸಂಕಲನ 1992 ರಲ್ಲಿ ಪ್ರಕಟವಾಯಿತು. ವ್ಯಕ್ತಿ ಮತ್ತು ಅವನ ಕೌಟುಂಬಿಕ ಸಂಬಂಧಗಳು, ಕುಟುಂಬ ನಿರ್ವಹಣೆಯ ವಿವಿಧ ಹಾದಿಗಳು, ಬದುಕನ್ನು ಅನುಭವಿಸುವ ರೀತಿ, ಅದನ್ನು ರೂಪಿಸಿದ ಸಮುದಾಯದ ಆಕೃತಿ ಇತ್ಯಾದಿ ಸಂಗತಿಗಳು ಈ ಕಥಾಸಂಕಲನದಲ್ಲಿ ಒಡಮೂಡಿವೆ.

1995 ರಲ್ಲಿ ಪ್ರಕಟಗೊಂಡ 'ಹುಲಿ ಸವಾರಿ' ಕಥಾ ಸಂಕಲನ ಭಾರತೀಯ ಸಮಾಜದ ಆಧುನಿಕತೆ ಮತ್ತು ಜಾಗತೀಕರಣದ ಪರಿಣಾಮಗಳನ್ನು ಅತ್ಯಂತ ಸಮರ್ಥವಾಗಿ ಒಳಗೊಂಡ ಕೃತಿ.

ಜನಸಂಖ್ಯಾಸ್ಫೋಟದಿಂದ ನರಳುತ್ತಿರುವ ಭಾರತದಂತಹ ದೊಡ್ಡರಾಷ್ಟ್ರದಲ್ಲಿ, ವಿದೇಶಿ ಬಂಡವಾಳದ ಪರಿಣಾಮ ಕಳೆದೆರೆಡು ದಶಕಗಳಲ್ಲಿ ಭಾರತದಲ್ಲಿ ಆಗುತ್ತಿರುವ ಪ್ರಗತಿ ಮತ್ತು ಆ'ಪ್ರಗತಿ'ಯ ಉಪಪ್ರಮೇಯಗಳಾದ ಬೃಹತ್ ಅಣೆಕಟ್ಟುಗಳು, ಅಣುಸ್ಥಾವರಗಳು ಮುಂತಾದ ಸಂಗತಿಗಳನ್ನು ಸ್ಥೂಲವಾಗಿ ಆಧುನಿಕೋತ್ತರ ಎಂದು

ಗುರುತಿಸಬಹುದಾದ ವೈಚಾರಿಕತೆಯ ನಿಲುವಿನಿಂದ ಈ ಕಥಾಸಂಕಲನದ ಕಥೆಗಳು ವಿಶ್ಲೇಷಿಸುತ್ತವೆ ಹಾಗೂ ಪ್ರಶ್ನಿಸುತ್ತವೆ.

'ಹುಲಿ ಸವಾರಿ' ಪ್ರಕಟವಾದ ಹತ್ತು ವರ್ಷಗಳ ನಂತರ (2005) ರಲ್ಲಿ ಪ್ರಕಟವಾದ ಕಥಾಸಂಕಲನ – ಮತ್ತೊಬ್ಬನ ಸಂಸಾರ. ಸಾಮಾಜಿಕ ಬದುಕಿನಲ್ಲಿ ಎದುರಾಗುವ ವ್ಯಕ್ತಿಗಳ ಪ್ರಾಮುಖ್ಯತೆ, ಅವರ ಮಹತ್ವಾಕಾಂಕ್ಷೆ, ಸೋಲು, ಹತಾಶೆ ಇತ್ಯಾದಿ ಅಂಶಗಳು ನಮ್ಮ ಕಣ್ಣ ಮುಂದೆ ಸಮಕಾಲೀನ ಸಮಾಜವನ್ನು ತೆರೆದಿಡುತ್ತವೆ.

'ಘಾಚರ ಘೋಚರ್' ಎಂಬ ವಿಚಿತ್ರ ಹೆಸರು ಏನಿರಬಹುದೆಂಬ ಕುತೂಹಲ ಮೂಡುವುದು ಸಹಜವಷ್ಟೇ !. ಯಾವುದೇ ಸರಳ ವಿಶ್ಲೇಷಣೆ, ವಿವರಣೆಗಳಿಗೆ ಸಿಲುಕಿದ, ಗಂಟುಗಂಟಾದ, ಸಿಕ್ಕುಸಿಕ್ಕಾದ, ಗೋಜಲು–ಗೋಜಲಾದ, ಅರ್ಥವಾಗಲಾರದ ಮನುಷ್ಯ ಸ್ವಭಾವ ಸಂಬಂಧ–ನಡಾವಳಿಗೆ ರೂಪಕವೆಂಬಂತೆ ಈ ಶಬ್ದವನ್ನೇ ಶೀರ್ಷಿಕೆಯಾಗಿ 2012 ರಲ್ಲಿ ವಿವೇಕ ಶಾನಭಾಗರು ತಮ್ಮ ಕಥೆಯೊಂದಕ್ಕೆ ಹಾಗೂ ಇದೇ ಹೆಸರಿನ ತಮ್ಮ ಕಥಾಸಂಕಲನವೊಂದನ್ನು ಹೊರತಂದರು.

ಅವಿಭಕ್ತ ಕುಟುಂಬದ ಸದಸ್ಯರು, ಅವರ ನಿರೀಕ್ಷೆಗಳು, ಕಾಫಿ ಹೌಸ್‌ನ ವೇಟರ್ ವಿನ್ಸೆಂಟ್‌ನ ಪಾತ್ರ, ಸಾವಿನ ಅಂಚಿನಲ್ಲಿ ನಿಂತು ಇದುವರೆಗೆ ಬಾಳಿದ ಬದುಕಿನ ಅವಲೋಕನ ಮಾಡುವ ಮನಸ್ಥಿತಿಯ ಚಿತ್ರಣ (ವಿಚಿತ್ರ ಕತೆ), ಇನ್ನೂ ಅನೇಕ ಸಂಗತಿಗಳು ಈ ಕಥಾಸಂಕಲನದಲ್ಲಿ ಅಡಕವಾಗಿದೆ.

**ಕನ್ನಡದ ಸಣ್ಣಕಥೆಗಳ ಸ್ವರೂಪ ಮತ್ತು ಉದ್ದೇಶ :**

ಮನುಷ್ಯ ಜೀವನದೊಂದಿಗೆ ಕಥೆಯೂ ಆರಂಭವಾಗಿರಬೇಕು. ಅನುಭಾವಗಳೊಂದಿಗೆ ಹೆಣೆದುಕೊಂಡಿರುವ ಸಣ್ಣಕಥೆಗಳು ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದ್ದು, ಪಾಶ್ಚಾತ್ಯರಲ್ಲಿ ಒಂಬತ್ತನೆಯ ಶತಮಾನದ ಶಿವಕೋಟಾಚಾರ್ಯ ರಚಿತ 'ವಡ್ಡಾರಾಧನೆ' ಕನ್ನಡದ ಮೊದಲ ಕಥಾಗ್ರಂಥವೆಂದು ಜನಜನಿತವಾಗಿದೆ. ಅಂದಿನಿಂದ ಇಂದಿನವರೆಗೂ ಕನ್ನಡ ಭಾಷೆಯಲ್ಲಿ ಬೆಳೆದುಬಂದಿರುವ ಸಣ್ಣ ಕಥೆಗಳ ಪರಂಪರೆಯ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದೆ.

**ವಿವೇಕ ಶಾನಭಾಗರ ಬದುಕು-ಬರಹ :**

ಮನುಷ್ಯ ಭಾವನೆಗಳ ಮೇಲೆ ಚಿಂತನೆಯ ಸಿಂಚನವನ್ನು ಮಾಡುವವನು ಕಥೆಗಾರ. ತನ್ನ ಸ್ವಂತಿಕೆಯ ಮುದ್ರೆಯನ್ನೊತ್ತುವ ಲೇಖಕನ ಸ್ಥೂಲ ಪರಿಚಯ ಅಗತ್ಯ. ಈ ನಿಟ್ಟಿನಲ್ಲಿ ವಿವೇಕ ಶಾನಭಾಗರ ಬದುಕು-ಬರಹದ ಬಗ್ಗೆ ತಿಳಿದುಕೊಳ್ಳುವುದು ಔಚಿತ್ಯಪೂರ್ಣವಾಗಿದೆ. ವಿವೇಕ ಶಾನಭಾಗರ ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ಉದ್ಯೋಗ, ಸಾಹಿತ್ಯ ಕೃಷಿ, ಪ್ರಶಸ್ತಿಗಳ ಕುರಿತಂತೆ ಈ ಅಧ್ಯಾಯದಲ್ಲಿ ವಿವರಣೆಯನ್ನು ನೀಡಲಾಗಿದೆ.

**ವಿವೇಕ ಶಾನಭಾಗರ ಕೃತಿಗಳಲ್ಲಿ ಅಂತರಂಗದ ತುಡಿತ :**

'ಅಂಕುರ' ವಿವೇಕ ಶಾನಭಾಗರ ಮೊದಲ ಕಥಾ ಸಂಕಲನ (1985). ನವ್ಯಸಾಹಿತ್ಯದ ಪ್ರಭಾವ ಇಲ್ಲಿನ ಕಥೆಗಳ ಮೇಲಿದೆ. ವ್ಯಕ್ತಿಯೊಬ್ಬನ ಬೇರೆ ಬೇರೆ ಸ್ಥಿತ್ಯಂತರಗಳಲ್ಲಿ ವಿಶೇಷವಾಗಿ ಕಿಶೋರಾವಸ್ಥೆಯಲ್ಲಿ ಗೊಂದಲಗೊಳಿಸುವ 'ಕಾಮ' – ಇಲ್ಲಿನ ಮುಖ್ಯ ವಿಷಯ.

1992 ರಲ್ಲಿ ಪ್ರಕಟವಾದ 'ಲಂಗರು' ಕಥಾಸಂಕಲನ ಕಥೆಗಾರರಾಗಿ ವಿವೇಕ ಶಾನಭಾಗರ ಬೆಳವಣಿಗೆಯ ಹಾದಿಯನ್ನು ತೋರಿಸುತ್ತದೆ. ಮನುಷ್ಯ ತನ್ನ ಸುತ್ತಲೂ ಅನಿವಾರ್ಯವಾಗಿ ಕಟ್ಟಿಕೊಳ್ಳುವ ಗೋಜಲು ಸಂಬಂಧಗಳು ಉಂಟುಮಾಡುವ ಮಾನಸಿಕ ಒತ್ತಡ-ಹೃದಯದ ವೇದನೆಯನ್ನು ಕಟ್ಟಿಕೊಡುತ್ತವೆ.

**ವಿವೇಕ ಶಾನಭಾಗರ ಕಥೆಗಳಲ್ಲಿ ಜಾಗತೀಕರಣದ ಸವಾಲುಗಳು :**

ಆಧುನೀಕರಣದ ಬಿಸಿ, ಜಾಗತೀಕರಣದ ಕರಾಳತೆಯನ್ನು ತಣ್ಣನೆ ಬಿಂಬಿಸುವ ಕಥಾ ಸಂಕಲನ ಹುಲಿ ಸವಾರಿ. ಪ್ರಗತಿಯ ಹೆಸರಿನಲ್ಲಿ ನಡೆಯಬಹುದಾದ ನಯವಂಚನೆ, ಶೋಷಣೆ, ಭಾರತೀಯ ಸಮಾಜದಲ್ಲಿ ಹೇಗೆ ಸ್ವೀಕೃತ ಮೌಲ್ಯಗಳಾಗಿ ಬದಲಾಗಿವೆ ಎಂಬುದನ್ನು ವಿವೇಕ ಶಾನಭಾಗರು ಈ ಕಥಾ ಸಂಕಲನದಲ್ಲಿ ಒಡಮೂಡಿಸಿದ್ದಾರೆ. ದೇಶೀಯತೆಯ ತುಳಿದು, ಕೃತಕತೆಯ ಪರದೆಯ ಎಲ್ಲರ ಕಣ್ಣ ಮುಂದೆ ಎಳೆದು ವಿದೇಶಿ ಕಂಪನಿಗಳು ನಡೆಸುತ್ತಿರುವ ಮೋಸದಾಟಗಳು – ಇಂದಿನ ವಾಸ್ತವ ಜಗತ್ತಿನ ಕಠೋರ ಸತ್ಯಗಳನ್ನು ಸಾರುತ್ತವೆ.

**ವಿವೇಕ ಶಾನಭಾಗರ ಕಥೆಗಳಲ್ಲಿ ಮನುಷ್ಯ ಸಂಬಂಧಗಳ ಸಂಕೀರ್ಣತೆ ಮತ್ತು ಸಾಮಾಜಿಕ ಕಳಕಳಿ :**

ಗಂಟು-ಗಂಟಾಗಿರುವ, ಬಿಡಿಸಲು ಕಷ್ಟವಾಗಿರುವ, ಯಾವುದೇ ಸರಳ ವಿಶ್ಲೇಷಣೆ, ಟಿಪ್ಪಣಿಗಳಿಗೆ ಸಿಲುಕದ, ಗೋಜಲು-ಗೋಜಲಾದ ಸಂಕೀರ್ಣವಾದ ಮನುಷ್ಯ ಸ್ವಭಾವದ ಪ್ರತಿನಿಧಿಯಂತೆ 'ಘಾಚರ್ ಘೋಚರ್' ಎಂಬ ಶಬ್ಧವನ್ನು ತಮ್ಮ ನೀಳ್ಗತೆಯೊಂದಕ್ಕೆ ಮತ್ತು ಅದನ್ನೇ ಕಥಾಸಂಕಲನಕ್ಕೂ ಇಟ್ಟಿರುವುದು ಧ್ವನಿಪೂರ್ಣವಾಗಿದೆ. ಬಹುರಾಷ್ಟ್ರೀಯ ಕಂಪನಿಯೊಂದರ ಉದ್ಯೋಗಿ, ಬೇರೆ ದೇಶಕ್ಕೆ ಹೋಗಿದ್ದಾಗ ಬೇರೆ ವ್ಯಕ್ತಿಯೊಬ್ಬನನ್ನು ಭೇಟಿಯಾದಾಗ ಜರುಗುವ ಸಂಗತಿಗಳು. ನಮ್ಮ ಪ್ರಸ್ತುತ ಕಾರ್ಪೊರೇಟ್ ಜಗತ್ತಿನ ಅಸಾಂಗತ್ಯವನ್ನು ಧ್ವನಿಸುತ್ತವೆ (ನಿರ್ವಾಣ).

**ವಿವೇಕ ಶಾನಭಾಗರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು :**

ಸಾಹಿತ್ಯ ಮತ್ತು ಸಂಸ್ಕೃತಿ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಈಮಾತು ಸಣ್ಣಕಥೆಗಳಿಗೂ ಅನ್ವಯಿಸುವಂತಹುದು. ಹೇಗೆಂದರೆ, ಸಣ್ಣಕಥೆಗಳ ಮೂಲಕ ಆಯಾ ಕಾಲಘಟ್ಟದ ಸಾಮಾಜಿಕ ಕಟ್ಟುಪಾಡುಗಳು, ಸ್ವಾತಂತ್ರ್ಯ, ಅಂದಿನ ಕಾಲದ ಜನಾಂಗದ ಧೋರಣೆಗಳು, ಸಂಸ್ಕೃತಿ, ಕಲೆ, ಸ್ತ್ರೀ ಗೌರವ ಇತ್ಯಾದಿಗಳೂ ತಿಳಿದುಬರುತ್ತವೆ. ಆಯಾಕಾಲದ ಸಾಮಾಜಿಕ ಪರಿಸ್ಥಿತಿಗಳು ಸ್ತ್ರೀ ಅಭಿವ್ಯಕ್ತಿಗೆ ಎಷ್ಟರಮಟ್ಟಿಗೆ ಪೂರಕವಾಗಿದ್ದವು ಎಂಬುದನ್ನು ಅರ್ಥಮಾಡಿಕೊಳ್ಳಲಾಗಿದೆ.

ವಿವೇಕ ಶಾನಭಾಗರ ಸಣ್ಣಕಥೆಗಳಲ್ಲಿನ ಸ್ತ್ರೀ ಪಾತ್ರಗಳು, ಸ್ವತಂತ್ರ ಅಭಿವ್ಯಕ್ತಿಯನ್ನು ಹೊಂದಿದ್ದು, ಸಾಧ್ಯವಾದಲ್ಲೆಲ್ಲಾ ತಮ್ಮ ಸ್ಥಾನವನ್ನು ಗಟ್ಟಿಗೊಳಿಸುತ್ತವೆ. 'ಅಂಕುರ'ದ ಪ್ರೇಮಕ್ಕ ಇದಕ್ಕೊಂದು ಉದಾಹರಣೆ. ಸಂದರ್ಭದ ಕೈಗೊಂಬೆಯಾಗಿ ವರ್ತಿಸುವ ಕೆಲವು ಸ್ತ್ರೀ ಪಾತ್ರಗಳೂ ವಿವೇಕರ ಸಣ್ಣಕಥೆಗಳಲ್ಲಿವೆ. ತಾಯಿ, ತಂಗಿ, ಹೆಂಡತಿ, ಗೆಳತಿ ಇತ್ಯಾದಿ ಪಾತ್ರಗಳು ತಮ್ಮದೇ ವೈಶಿಷ್ಟ್ಯತೆಗಳೊಂದಿಗೆ ಗಮನ ಸೆಳೆಯುತ್ತವೆ. ಈ ಅಧ್ಯಾಯದಲ್ಲಿ ಅವರ ಸಣ್ಣಕಥೆಗಳಲ್ಲಿನ ಕೆಲವು ಸ್ಫೂರ್ತಿದಾಯಕ ಸ್ತ್ರೀ ಪಾತ್ರಗಳ ಬಗ್ಗೆ ಚರ್ಚಿಸಲಾಗಿದೆ.

ಅಕ್ಷರ ಜಗತ್ತಿಗೆ ತೆರೆದುಕೊಂಡ ಕನ್ನಡ ವಿದ್ವಾಂಸರು, ಶಿಕ್ಷಕರು, ಪ್ರಾಧ್ಯಾಪಕರು, ಅಕಾಡೆಮಿಕ್ ವಲಯದ ವ್ಯಕ್ತಿಗಳು ಮಾತ್ರ ಬರವಣಿಗೆಯನ್ನು ಕೈಗೆತ್ತಿಕೊಳ್ಳುತ್ತಿದ್ದ ಕಾಲವೊಂದಿತ್ತು. ಈಗ ಕಾಲ ಬದಲಾಗಿದೆ. ಇಂದು ಬರಹಗಾರರ ಸಂಖ್ಯೆಯು ಹೆಚ್ಚಾಗಿದೆ. ಮುದ್ರಣ ವ್ಯವಸ್ಥೆ ಸರಳವಾಗಿದೆ.ವಿಭಿನ್ನ ಸ್ತರಗಳ ಆಸಕ್ತ ಬರಹಗಾರರು ಅತ್ಯುತ್ತಮವಾದ ಸೃಜನಶೀಲ ಸಾಹಿತ್ಯವನ್ನು ಸೃಷ್ಟಿ ಮಾಡುತ್ತಾ, ಕನ್ನಡ ಸಾಹಿತ್ಯದ ಸಾಧ್ಯತೆಗಳನ್ನು ವಿಸ್ತರಿಸುತ್ತ, ಸಾಹಿತ್ಯ ಕಣಜಕ್ಕೆ ವಿಶೇಷವಾದ ಕಸುವನ್ನು ತುಂಬುತ್ತಿದ್ದಾರೆ.

ಮನುಷ್ಯನ ಮಾತು ಮುಂದೆ ಸಾಗುತ್ತಿದ್ದಂತೆ ಕಥೆಗಳು ಹುಟ್ಟುತ್ತಲೇ ಇರುತ್ತವೆ. ಹಸಿರು ತುಂಬಿದ ಬನದಲ್ಲಿ ಎಲ್ಲ ಹೂಗಳು ಚೆಂದ ಕಾಣುವಂತೆ ಯಾವುದೇ ಒಂದು ನಿರ್ದಿಷ್ಟ ಪಂಥ ಅಥವಾ ಚಳುವಳಿಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳದೆ, ನಿಶ್ಯಬ್ದವಾಗಿ ತಮ್ಮ ಸಾಹಿತ್ಯಕೃಷಿಯ ಮೂಲಕವೇ ಅರ್ಥಪೂರ್ಣ ಅನುಸಂಧಾನವನ್ನು ಮಾಡುತ್ತಾ, ವಿವೇಕ ಶಾನಭಾಗರು ಆಧುನಿಕ ಸಣ್ಣಕಥಾಲೋಕದ ಮಹತ್ವದ ಕಥೆಗಾರರಲ್ಲಿ ಒಬ್ಬರಾಗಿ ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತಾರೆ.

**ಆಕರ ಗ್ರಂಥಗಳು:**

1. ವಿವೇಕ ಶಾನಭಾಗ – ಅಂಕುರ, 1985 – ಸಂಕಲನ, ವಿದ್ಯಾರಣ್ಯಪುರಂ, ಮೈಸೂರು–570008.

2. ವಿವೇಕ ಶಾನಭಾಗ – ಲಂಗರು, 1992 – ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ.

3. ವಿವೇಕ ಶಾನಭಾಗ – ಹುಲಿಸವಾರಿ, 1995 – ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ.

4. ವಿವೇಕ ಶಾನಭಾಗ – ಮತ್ತೊಬ್ಬನ ಸಂಸಾರ, 2005 – ಅಂಕಿತ ಪುಸ್ತಕ (ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು), ಬಸವನಗುಡಿ, ಬೆಂಗಳೂರು–560004.

5. ವಿವೇಕ ಶಾನಭಾಗ – ಘಾಚರ್ ಘೋಚರ್, 2012 – ಅಕ್ಷರ ಪ್ರಕಾಶನ, ಹೆಗ್ಗೋಡು, (ಸಾಗರ), ಕರ್ನಾಟಕ.

**ಪರಾಮರ್ಶನ ಗ್ರಂಥಗಳು:**

1. ಅಶೋಕ.ಟಿ.ಪಿ. – ಕಥನ ಪ್ರೀತಿ – 20013 – ಒಂದು ನೂರು ಕನ್ನಡ ಸಣ್ಣ ಕಥೆಗಳ ವಿಶ್ಲೇಷಣೆ – ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ.

2. ಡಾ. ಗೀತಾ ಶೆಣೈ – ಕತೆಯಾದಳು ಹುಡುಗಿ (ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ) ಪ್ರಕಾಶಕರು, ಕಾರ್ತಿಕ್ ಎಂಟರ್‌ಪ್ರೈಸಸ್, ವಿಜಯನಗರ, ಬೆಂಗಳೂರು–560 040.

3. ಡಾ. ಗೋವಿಂದರಾಜ ಗಿರೆಡ್ಡಿ – ಕನ್ನಡದ ಹತ್ತು ಅತ್ಯುತ್ತಮ ಸಣ್ಣ ಕಥೆಗಳು

4. ಡಾ. ಗೋವಿಂದರಾಜ ಗಿರೆಡ್ಡಿ – ಸಣ್ಣ ಕಥೆಗಳ ಸಂಕಲನ (ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಮಾಲಿಕೆ)

5. ದಿವಾಕರ್.ಎಸ್ – ಶತಮಾನದ ಸಣ್ಣ ಕಥೆಗಳು – 1997 – ಪ್ರಿಸಂ ಬುಕ್ಸ್, ಬೆಂಗಳೂರು.

6. ಡಾ. ಬೈರೇಗೌಡ – ಕಥಾ ಜಗತ್ತು.

7. ಡಾ. ಭೈರಪ್ಪ.ಎಸ್.ಎಲ್ – ಕಥೆ ಮತ್ತು ಕಥಾವಸ್ತು–2003 ( ಮೂರನೆಯ ಮುದ್ರಣ)– ಸಾಹಿತ್ಯ ಭಂಡಾರದ ಪ್ರಕಾಶನ– ಜಂಗಮ ಮೇಸ್ತ್ರಿಗಲ್ಲಿ, ಬಳೇಪೇಟೆ– ಬೆಂಗಳೂರು–53.

8. ಡಾ. ಮಲರ್ ವಿಳಿ – 'ಮಾಸ್ತಿ – ಪುದುಮೈಪಿತ್ತನ್' ಒಂದು ಅಧ್ಯಯನ – 2014 (ಮಹಾಪ್ರಬಂಧ)

9. ಮಹಿಳಾ ಕಥಾ ಸಂಪದ– ಮೂರು ತಲೆಮಾರಿನ ಉತ್ತಮ ಕನ್ನಡ ಲೇಖಕಿಯರ 108 ಕಥೆಗಳು– ಸಂಪಾದಕರು– ಪುಂಡಲೀಕ ಕಲ್ಲಿಗನೂರು ಮತ್ತು ಹಂಸ . ಆರ್. ಕನ್ನಡ ಪ್ರಕಾಶನ–2011.

10. ರಾಮಚಂದ್ರನ್.ಸಿ.ಎನ್ – 'ಆಖ್ಯಾನ–ವ್ಯಾಖ್ಯಾನ' – ವಿಮರ್ಶಾ ಲೇಖನಗಳ ಸಂಕಲನ – 2011 – ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು–560009.

11. ರಂಗನಾಥ, ಮಾವಿನಕೆರೆ (ಸಂ) 1992 – ಕಥಾಗುಚ್ಛ – ಡಾ.ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು.

12. ರಶೀದ್ ಅಬ್ದುಲ್ (ಸಂ) 1996 – ಸಣ್ಣ ಕತೆ – ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

13. ಶೇಷಗಿರಿ ರಾವ್.ಎಲ್.ಎಸ್. – ಕೃತಿ – ಹೊಸಗನ್ನಡ ಸಾಹಿತ್ಯ

14. ಡಾ. ಹೊನ್ನಯ್ಯ – ಕನ್ನಡ ಸಣ್ಣ ಕಥೆಗಳಲ್ಲಿ ದಲಿತ ಸಂಸ್ಕೃತಿ.

